

# ಚೆಲುವಿನ ಕನ್ನಡ ನಾಡು

ಡಾ॥ ಕೆ. ಶಿವರಾಮ ಕಾರಂತ



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು–೫೬೦ ೦೦೨

ಡಾ|| ಕೆ. ಶಿವರಾಮ ಕಾರಂತ ಅವರಿಂದ ರಚಿಸಲ್ಪಟ್ಟ 'ಚೆಲುವಿನ ಕನ್ನಡ
ನಾಡು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ
ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್
ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

CHELUVINA KANNADA NADU—written in Kannada by Dr. K. Shivaram Karanth. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009



ಬೆಲೆ ರೂ. ೨-೦೦

ಮುಖಪುಟ : ಬಿ. ಕೇಸರ್ ಸಿಂಗ್

ಮುದ್ರಕರು : ಎಚ್. ಎಸ್. ಎನ್. ರಾವ್ ಐಬಿಎಚ್ ಪ್ರಕಾಶನ ಪ್ರಿಂಟರಿ,
ಬೆಂಗಳೂರು-೫೬೦ ೦೦೯

ಭಾರತ ನಮ್ಮ ದೇಶ. ಅದರಲ್ಲಿರುವ ನಾವು ಭಾರತೀಯರು. ಮೊನ್ನೆ ಮೊನ್ನೆಯ ತನಕವೂ ನಮ್ಮ ದೇಶವನ್ನು ಹಿಂದುಸ್ತಾನ ಎಂದು ಕರೆಯು ತ್ತಿದ್ದರು. ಪ್ರಾಚೀನ ಕಾಲದಲ್ಲಿ ಇದೇ ಭೂಮಿಯನ್ನು ಭರತಖಂಡ ಎಂದು ಕರೆದದ್ದುಂಟು. ಆ ಕಾರಣದಿಂದ ಇಂದು, ತಿರುಗಿ ಅದನ್ನು 'ಭಾರತ ದೇಶ' ಎಂದು ಕರೆಯತೊಡಗಿದ್ದೇವೆ. ಈ ದೇಶದಲ್ಲಿ ಹುಟ್ಟಿದ ನಮಗೆ ಅದೆಂಥ ದೇಶ, ಆ ನಾಡಿನ ಸ್ವರೂಪವೇನು ? ಅದರಲ್ಲಿ ಏನೆಲ್ಲ ಇದೆ ? ಜನ ಹೇಗೆ ಇಲ್ಲಿ ಜೀವಿಸುತ್ತಿದ್ದಾರೆ ಎಂದು ತಿಳಿಯದೆ 'ನಮ್ಮ ದೇಶ', 'ನಮ್ಮ ದೇಶ' ಎಂದು ಹೆಮ್ಮೆಪಟ್ಟು ಏನು ಪ್ರಯೋಜನ ? ಆ ನಮ್ಮ ದೇಶ ಚಿಕ್ಕ ಒಂದು ಪ್ರಾಂತವಾದರೆ, ಅದನ್ನು ಇವತ್ತಲ್ಲ ನಾಳೆಯಾದರೂ ಸುತ್ತಿ ಸುಳಿದು ತಿಳಿಯಬಹುದು. ಸಾವಿರದ ಎಂಟುನೂರು ಮೈಲು ಉದ್ದ, ಸಾವಿರದೈನೂರು ಮೈಲು ಅಗಲವುಳ್ಳ ಇಷ್ಟೊಂದು ದೊಡ್ಡ ದೇಶವನ್ನು ತಿಳಿಯುವುದು ಮಾತ್ರ ಸುಲಭವಲ್ಲ. ಹೀಗಾಗಿ, ಹೆಚ್ಚಿನ ಜನರ ಪಾಲಿಗೆ ದೇಶದ ಹೆಸರು ಗೊತ್ತಿದ್ದರೂ, ಅದೆಂಥ ದೇಶ ಎಂದು ತಿಳಿಯುವುದು ಕಷ್ಟ.

ನಾವೆಲ್ಲ ಒಂದು ಹಳ್ಳಿಯಲ್ಲೋ, ಪಟ್ಟಣದಲ್ಲೋ ಹುಟ್ಟಿ ಬೆಳೆಯು ತ್ತೇವೆ. ಅದನ್ನೇ ನಮ್ಮ ಊರು ಎಂದು ಕರೆಯುತ್ತೇವೆ. ನಮ್ಮ ಊರಿನ ಬಯಲುಗಳ, ಗುಡ್ಡಗಳ, ಕಾಡುಗಳ, ನದಿಗಳ, ಪರಿಚಯ ನಮಗೆ ಆಗು ವುದು ಸುಲಭ. ನಿತ್ಯ ನಿತ್ಯವೂ ನಾವು ನಮ್ಮ ಊರಿನಲ್ಲಿ ಅಲೆದಾಡುವ ಪ್ರಸಂಗ ಬರುವುದರಿಂದ, ಅವುಗಳ ಪರಿಚಯ ಉಂಟಾಗುತ್ತದೆ. ಒಂದಲ್ಲ ಒಂದು ಕಾರಣಕ್ಕಾಗಿ ನಾವು ಆಚೀಚಿನ ಊರುಗಳಿಗೂ ಹೋಗುತ್ತೇವೆ. ನಮ್ಮ ನೆಂಟರಿರುವ ಊರಿಗೆ ಹೋಗುತ್ತೇವೆ ; ಜಾತ್ರೆ ನಡೆಯುವ ಊರಿಗೆ ಹೋಗುತ್ತೇವೆ. ವ್ಯಾಪಾರಕ್ಕಾಗಿ, ಮುಂಜಿ, ಮದುವೆಗಳಿಗಾಗಿ ಆಚೀಚಿನ ಊರುಗಳಿಗೆ ಹೋಗುತ್ತೇವೆ. ಹಾಗೆ ಹೋಗಿ ಬರುವುದರಿಂದ ನಮಗೆ

ಸಂತೋಷವೂ ಆಗುತ್ತದೆ. ಅಂಥ ಸಂತೋಷ ಎರಡು ಕಾರಣಗಳಿಂದ ನಮಗೆ ಬರಬಹುದು. ಪರ ಊರಿನ ಜನರೊಡನೆ ಮಾತನಾಡಿ, ಅವರ ವಿಚಾರ ತಿಳಿದು, ಅವರ ನಡೆ ನುಡಿ ಕಂಡು, ಹೆಚ್ಚಿನ ತಿಳಿವಳಿಕೆ ಉಂಟಾಗಿ ಸಂತೋಷ ಬರಬಹುದು. ಅಂಥ ಸಂತೋಷಕ್ಕೆ, ಹೊರಗಣ ಜನರೊಡನೆ ಮಾತನಾಡು ವುದಕ್ಕೆ, ನಮಗೆ ಬೇಕಾದ್ದನ್ನು ಕೇಳಿ ತಿಳಿಯುವುದಕ್ಕೆ ಮೊದಲು ಅವರ ಭಾಷೆ ನಮಗೆ ತಿಳಿದಿರಬೇಕು. ನಮ್ಮ ಭಾಷೆ ಅವರಿಗೆ ತಿಳಿದಿರಬೇಕು. ನಮ್ಮ ಭಾರತದಲ್ಲಿ ಹದಿನಾಲ್ಕರಷ್ಟು ಬರೆಯುವ ಭಾಷೆಗಳಿವೆ. ಐನೂರರಷ್ಟು ಬರಿದೆ ಮಾತನಾಡುವ ಭಾಷೆಗಳಿವೆ. ಹೀಗಾಗಿ, ಭಾರತದ ಯಾವತ್ತು ಜನ ರೊಡನೆ ನಾವು ಮಾತನಾಡಿ ಅವರನ್ನು ತಿಳಿಯುವುದೆಂದರೆ ಅಸಾಧ್ಯದ ವಿಷಯ.

ಆದರೂ, ಭಾಷೆ ತಿಳಿಯುವ ಜನರ ಬಳಿಗೆ ಹೋಗಿ ಮಾತನಾಡಿ ಸಂತೋಷಗೊಳ್ಳಬಹುದಲ್ಲ. ನಾವು ಆಡುವ ಭಾಷೆ ಕನ್ನಡ, ನಮ್ಮ ಸುತ್ತಮುತ್ತಲೂ ಹೆಚ್ಚಾಗಿ ಕನ್ನಡ ಮಾತನಾಡುವ ಜನರೇ ನೆಲೆಸುತ್ತಿದ್ದಾರೆ. ಇಂಥ ಪ್ರದೇಶವನ್ನು ಇಂದು ಕರ್ನಾಟಕ ಎಂದು ಕರೆಯುತ್ತಿದ್ದೇವೆ. ಈ ಕರ್ನಾಟಕವಾದರೂ ಸಣ್ಣಪುಟ್ಟ ಭೂಭಾಗವಲ್ಲ. ಅದರ ಉದ್ದ ಮುನ್ನೂರು ಮೈಲಷ್ಟು ಇದ್ದರೆ, ಅಗಲ ಇನ್ನೂರರಷ್ಟು ಇದ್ದೀತು. ಅಷ್ಟು ವಿಸ್ತಾರದಲ್ಲಿ ಎರಡು ಕೋಟಿಗಿಂತ ಹೆಚ್ಚು ಜನ ಬಾಳಿ ಬದುಕಿದ್ದಾರೆ. ಈ ಜನ ಬದುಕು ತ್ತಿರುವ ನೆಲ ಯಾವ ರೀತಿಯದು ? ಇಲ್ಲಿ ಜೀವನಕ್ಕೆ ಏನೇನು ಮಾಡಿಕೊಂಡಿ ದ್ದಾರೆ ; ಅವರ ಮನಸ್ಸು ಸಂತೋಷಗೊಳ್ಳುವುದಕ್ಕೆ ಏನೇನು ಅನುಕೂಲತೆ ಗಳಿವೆ ಎಂದೆಲ್ಲ ತಿಳಿಯಬೇಡವೇ ? ಇಡಿಯ ಭಾರತದ ಪರಿಚಯ, ಅಲ್ಲಿನ ಜನಗಳ ಪರಿಚಯ ನಮಗೆ ಕಷ್ಟವಾಗಬಹುದಾದರೂ ನಮ್ಮದೇ ಮಾತನಾಡುವ ಕನ್ನಡದ ನೆಲ ಮತ್ತು ಜನಗಳ ಪರಿಚಯ ಮಾಡಿಕೊಳ್ಳುವುದು ಅಷ್ಟೊಂದು ಕಷ್ಟವಾಗದು. ಚಿಕ್ಕವರಾದ ನೀವು ಈ ಕನ್ನಡ ನಾಡಿನ ಉದ್ದಕ್ಕೂ ಅಲೆದಿರ ಲಾರಿರಿ. ಹಾಗೆ ಅಲೆದಾಡಿದ್ದಾದರೆ–ಏನೇನು ಎಲ್ಲಿದೆ ಎಂಬುದು ಗೊತ್ತಾದೀತು. ಹಾಗೆ ಅಲೆದಾಡಿದ ನಾನು, ನಿಮ್ಮಲ್ಲಿ ಸಂಚಾರದ ಆಸೆ ಬೆಳೆಸುವುದಕ್ಕೆ, ಈ ನಾಡಿನ ನೆಲ, ಜಲ, ಹೇಗಿವೆ ಎಂಬ ಸ್ಥೂಲ ಕಲ್ಪನೆ ಕೊಡುವುದಕ್ಕೆ ಈ ಚಿಕ್ಕ ಬರಹದಲ್ಲಿ ಪ್ರಯತ್ನಿಸುತ್ತಿದ್ದೇನೆ.

ನಮ್ಮ ಕರ್ನಾಟಕದ ನೆಲ ಎಂಥದು ? ಅದರಲ್ಲಿ ಏನೇನು ಕಾಣಬಹುದು ಎಂಬ ವಿಷಯ ಹೇಳುತ್ತೇನೆ. ನಿಮಗೆ ನಿಮ್ಮ ಮನೆಯನ್ನು ಬಿಟ್ಟು

ಊರಿನ ಬಯಲಿನಲ್ಲಿ ಆಡಲು ಇಷ್ಟವಾಗುವುದಿಲ್ಲವೇ ? ಸಮೀಪದ ಗುಡ್ಡಗಳನ್ನು ಏರಬೇಕೆಂಬ ಆಸೆಯಾಗುವುದಿಲ್ಲವೇ ? ತುಸು ಸಮೀಪದಲ್ಲಿ ನದಿಯೊಂದು ಹರಿಯುತ್ತಿದ್ದರೆ, ಅಲ್ಲಿಗೆ ಹೋಗಿ ಈಜಬೇಕೆಂಬ ಆಸೆ ಹುಟ್ಟುವುದಿಲ್ಲವೇ ? ನೀವು ಕಾಡಿನ ಪ್ರಾಣಿಗಳಾದ ಆನೆ, ಹುಲಿಗಳ ವಿಚಾರ ಕೇಳಿರಬಹುದು. ಆದರೆ ಎಲ್ಲರೂ ಕಾಡುಗಳನ್ನು ನೋಡಿರಲಾರರು. ಅದರ ಹೆಸರನ್ನು ಕೇಳಿದರೇನೇ ಕೆಲವರಿಗೆ ಭಯವಾಗಬಹುದು. ಹುಲಿ, ಕರಡಿಗಳ ನೆನಪು ಬರಬಹುದು. ನಮ್ಮ ಈ ಕನ್ನಡ ನಾಡಿನಲ್ಲೇ ಬೇಕಷ್ಟು ಕಾಡುಗಳಿವೆ ; ಆ ಕಾಡಿನ ಮಗ್ಗುಲಲ್ಲೇ ವಾಸಿಸುವ ಜನರಿದ್ದಾರೆ ; ಗುಡ್ಡಗಳ ಮೇಲೆ ವಾಸಿಸುವವರಿದ್ದಾರೆ. ನಮ್ಮ ನಾಡಿನ ಪಡುವಣ ಅಂಚಿನಲ್ಲಿರುವ ಸಮುದ್ರ ತೀರದಲ್ಲೂ ಜನರಿದ್ದಾರೆ. ಆ ಸಮುದ್ರ ಎಂಥದು ? ಒಂದು ಕೆರೆಯಷ್ಟು ದೊಡ್ಡದೇ ? ಇನ್ನೂ ದೊಡ್ಡದೇ ? ನಮ್ಮ ಈ ನಾಡಿನ ಸಮುದ್ರದ ದಂಡೆಯಿಂದ ಒಂದು ಹಡಗಿನಲ್ಲಿ ಕುಳಿತು, ಎರಡು, ಮೂರು ಸಾವಿರ ಮೈಲು ದೂರದ ಆಫ್ರಿಕಾ ಭೂಖಂಡಕ್ಕೂ ಹೋಗಬಹುದು ಎಂದರೆ ನಿಮಗೆ ಆಶ್ಚರ್ಯವಾದೀತು. ಅಂಥ ದೊಡ್ಡ ಸಮುದ್ರ ಹೇಗಿದ್ದೀತು ? ಇಂಥ ವಿಷಯಗಳನ್ನೆಲ್ಲ ಹೇಳುವ ಆತುರ ನನಗೆ.

ನಮ್ಮ ಈ ಕರ್ನಾಟಕ ದೇಶದ ಉದ್ದಗಲ ೩೦೦ × ೨೦೦ ಮೈಲು ಅಂದಾಜು ಇದೆ. ಅದರ ನಕ್ಷೆಯನ್ನು ತೆಗೆದು ನೋಡಿದರೆ, ನಕ್ಷೆ ಬರೆದ ಕಾಗದ ಚಪ್ಪಟೆಯಾಗಿರುವ ಹಾಗೆ, ಭೂಮಿ ಮಾತ್ರ ಚಪ್ಪಟೆಯಾಗಿಲ್ಲ. ಭೂಮಿಯ ಮೇಲೆ ಚಪ್ಪಟೆಯಾದ ಪ್ರದೇಶಗಳೂ ಇವೆ, ಏರು ತಗ್ಗುಗಳು ತುಂಬಿದ ಭಾಗಗಳೂ ಇವೆ. ನಮ್ಮ ಕರ್ನಾಟಕದ ಕಡಲ ತೀರ–ಮರಳಿನ ಒಂದು ಚಾಪೆ ಹಾಸಿದಂತೆ, ಸುಮಾರು ಇನ್ನೂರು ಮೈಲು ಉದ್ದಕ್ಕೆ ಮಂಗಳೂರಿನಿಂದ ಕಾರವಾರದ ತನಕ ಎಂಬಂತೆ ಸಮತಟ್ಟಾಗಿ ಚಾಚಿಕೊಂಡಿದೆ. ಏರು ತಗ್ಗಿಲ್ಲದ ಆ ಕಡಲ ದಂಡೆ ಕೆಲವು ಕಡೆ ನೂರಡಿ ಅಗಲವಿದ್ದರೆ, ಇನ್ನು ಕೆಲವು ಕಡೆ ಎರಡು, ಮೂರು ಮೈಲು ಅಗಲವಿರಬಹುದು. ಅದರ ಮೇಲೆ ನಿಂತು ನಮ್ಮ ಪೂರ್ವಕ್ಕೆ ಕಣ್ಣನ್ನು ಹಾಯಿಸಿದರೆ ಅಲ್ಲಲ್ಲಿ–ನೂರು, ಇನ್ನೂರು, ಐನೂರು ಅಡಿ ಎತ್ತರದ ಗುಡ್ಡಗಳ ಸಾಲು ಕಾಣಿಸುತ್ತದೆ. ಗುಡ್ಡ, ಬೆಟ್ಟ, ಅವುಗಳ ಎಡೆಯಲ್ಲಿ ಹಳ್ಳ, ಕೊಳ್ಳಗಳು ಚಿತ್ರ ವಿಚಿತ್ರವಾಗಿ ಹಬ್ಬಿಕೊಂಡಿವೆ. ಯಾವುದಾದರೂ ಒಂದು ಗುಡ್ಡವನ್ನೇರಿ, ಪಶ್ಚಿಮಕ್ಕೆ ಮುಖ ಮಾಡಿ ನಿಂತಿದ್ದಾದರೆ ಆ ದಿಕ್ಕಿನಲ್ಲಿ ಹಿಂದೂಸಾಗರದ ಅಂಗವಾದ ಅರಬ್ಬಿ ಸಮುದ್ರ

ವಿಶಾಲವಾಗಿ ಹಾಸಿದ್ದು ಕಾಣಿಸುತ್ತದೆ. ದಿಗಂತದ ಅಂಚಿನ ತನಕ, ಅದರ ಎಡ ಬಲಕ್ಕೂ ಕಣ್ಣು ಚಾಚುವಷ್ಟು ದೂರಕ್ಕೂ ನೀಲವಾದ ಸಮುದ್ರದ ಸೆರಗು ಅಷ್ಟೊಂದು ಮನೋಹರವಾಗಿ ಹಬ್ಬಿಕೊಂಡದ್ದು ಕಾಣಿಸುತ್ತದೆ. ನಾವು ನಿಂತ ಬೆಟ್ಟದಿಂದ ಎಡ, ಬಲಕ್ಕೆ ನೋಡಿದರೆ-ಅನೇಕ ಗುಡ್ಡದ ಸಾಲು ಗಳು ಕಾಣಿಸುತ್ತವೆ. ಕೆಲವು ಗುಡ್ಡಗಳು ಹಸುರಿಲ್ಲದ ಕಂದು ಬಣ್ಣದ ಮಣ್ಣಿನ ದಂಡೆಗಳಂತಿರಬಹುದು. ಇನ್ನು ಹಲವು, ಹುಲ್ಲಿನ ಹಸಿರು ಹೊದಿಕೆ ಹೊತ್ತು, ಗಿಡಮರಗಳಿಂದ ತುಂಬಿಕೊಂಡು ಸೊಂಪಾಗಿ ಕಾಣಿಸಿಯಾವು. ಅವೇ ಗುಡ್ಡ ಗಳ ತಗ್ಗಿನಲ್ಲಿ ರೈತರು ಸಮತಟ್ಟುಮಾಡಿ ಕೃಷಿ ಮಾಡುವ ಅಂಕಣ, ಅಂಕಣ ಗದ್ದೆಗಳು, ತೆಂಗಿನ ತೋಟಗಳು, ತೆಂಗು, ಕಂಗು, ಕಬ್ಬು, ಬತ್ತದ ಪೈರು ಗಳಿಂದ ಹಸುರಾಗಿ ಕಾಣಿಸುವ ತುಂಬ ಚಂದದ ನೋಟ ಕಾಣಿಸಬಹುದು.

ಈ ಗುಡ್ಡಗಳಿಂದ ಕೆಳಕ್ಕಿಳಿದು, ಕಾಲು ಹಾದಿಯಾಗಿಯೋ, ರಸ್ತೆ ಯಲ್ಲೋ, ಪೂರ್ವದಿಕ್ಕಿಗೆ ನಡೆದು ಹೋದರೆ, ನಮ್ಮ ದಾರಿ ಮೆಲ್ಲ ಮೆಲ್ಲಗೆ ಏರುತ್ತಲೇ ಹೋಗುತ್ತದೆ. ಗುಡ್ಡಗಳ ಸಂಖ್ಯೆ ಹೆಚ್ಚುತ್ತದೆ. ಉತ್ತು ಬಿತ್ತಿದ ಹೊಲಗಳ ಸಂಖ್ಯೆ ಕಡಿಮೆಯಾಗುತ್ತದೆ. ದಾರಿಯ ಆಚೀಚೆ ಗಿಡ ಮರಗಳಿಂದ ತುಂಬಿಕೊಂಡ ಕಾಡುಗಳು ಇದಿರಾಗುತ್ತವೆ. ಗುಡ್ಡದ ಏರಿ ನಲ್ಲೂ ಕಾಡುಗಳು, ತಗ್ಗಿನಲ್ಲೂ ಕಾಡುಗಳು. ಅವುಗಳ ಎಡೆ ಎಡೆಗಳಲ್ಲಿ ಮನುಷ್ಯ ಉತ್ತು ಬಿತ್ತಿದ ಹೊಲಗಳು ಇದಿರಾಗುತ್ತವೆ. ಅನೇಕ ಕಡೆ ನಮ್ಮ ದಾರಿಗೆ ನದಿಗಳೂ ಅಡ್ಡವಾಗುತ್ತವೆ. ಅವನ್ನು ದಾಟಿ ಮುಂದೆ ಹೋದರೆ, ದಾರಿ ಮತ್ತೂ ಏರುತ್ತದೆ. ಹಾಗೆ ಏರುತ್ತ ಗುಡ್ಡಗಳ ಮಗ್ಗು ಲಿಂದ ಅಂಕು-ಡೊಂಕಾಗಿ ಸಾಗಿ ಮತ್ತೂ ಮುಂದ ಮುಂದಕ್ಕೆ ಹೋಗುತ್ತದೆ. ತೀರ ಕೊನೆಗೆ ಮೂಡಣ ದಿಕ್ಕಿನಲ್ಲಿ ಒಮ್ಮೆಗೇ ಕಡಿದಾಗಿ ಕಾಣಿಸುವ ಎತ್ತರದ ಪರ್ವತಗಳೇ ಇದಿರಾಗುತ್ತವೆ. ಈ ಪ್ರದೇಶ ಪಶ್ಚಿಮ ಘಟ್ಟಗಳದ್ದು. ಸಹ್ಯಾದ್ರಿ ಪರ್ವತ ಎಂದರೂ ಅದೇನೆ. ಇದು ಹೆಚ್ಚು ಕಡಿಮೆ ೧೮೦೦ ಅಡಿಗಳಿಂದ ೪೦೦೦ ಅಡಿ ಎತ್ತರವಾಗಿರುವುದೂ ಉಂಟು. ಕನ್ನಡ ನಾಡಿನ ಉತ್ತರದ ತುದಿಯಿಂದ ದಕ್ಷಿಣದ ತುದಿಯ ತನಕವೂ, ಮತ್ತು ಅದರ ಆಚೀ ಚೆಯೂ ಇದೇ ಬೆಟ್ಟಗಳ ಸಾಲು ನಿಂತಿದೆ. ಅದರ ತುಂಬ ದಟ್ಟವಾದ ಅರಣ್ಯಗಳಿವೆ ; ಅಲ್ಲಲ್ಲಿ ಹುಲ್ಲು ಬೆಳೆದ ಭಾಗಗಳಿವೆ ; ಹೆಬ್ಬಂಡೆಗಳ ಗೋಡೆ ಗಳಿವೆ. ಪಡುವಣ ಬಾನಿಂದ ತೇಲಿ ಬರುವ ಮುಗಿಲುಗಳೆಲ್ಲ ಈ ಪರ್ವತ ವನ್ನು ಮುದ್ದಿಸಿ ಮುದ್ದಿಸಿ ಮತ್ತೂ ಮುಂದಕ್ಕೆ ಸರಿಯುತ್ತವೆ. ಎಂಟು



ಪಶ್ಚಿಮ ಘಟ್ಟದ ಒಂದು ನೋಟ

ಹತ್ತು ಕಡೆಗಳಲ್ಲಿ ಏರುತ್ತ ಸರಿಯುವ ಅಂಕುಡೊಂಕಾದ ರಾಜ ರಸ್ತೆಗಳಿವೆ. ನಾವು ಪಶ್ಚಿಮ ಘಟ್ಟದ ಬೆನ್ನಿನ ಮೇಲೆ ನಿಂತು ಪಡುವಣದ ಸಮುದ್ರ ಕರಾವಳಿಯನ್ನು ನೋಡಿದೆವಾದರೆ ನಮ್ಮ ಮುಂದಕ್ಕಿರುವ ಯಾವತ್ತು ನೆಲ ಹಸಿರು ತುಂಬಿದ ನಂದನ ವನ. ಅದರ ನಡು ನಡುವೆ ಅದೆಷ್ಟೋ ನದಿಗಳು ಹರಿದು, ಸಮುದ್ರವನ್ನು ಕೂಡಿಕೊಳ್ಳುತ್ತವೆ. ಬಿಸಿಲು ಬಿದ್ದಾಗ ಈ ಅಂಕುಡೊಂಕು ನದಿಗಳು ಓಡುತ್ತಿರುವ ಹಾವುಗಳಂತೆ ಕಾಣಿಸುತ್ತವೆ.

ಹೀಗೆ ನಾವು ಘಟ್ಟದ ತುದಿಯನ್ನೇರಿ ಮತ್ತೂ ಮೂಡಣಕ್ಕೆ ಹೊರಟೆವಾದರೆ ಮುಂದಣ ದಾರಿ ಸ್ವಲ್ಪ ಸ್ವಲ್ಪವಾಗಿ ಇಳಿಯುತ್ತದೆ. ಬಹಳ ಇಳಿಯುವುದಿಲ್ಲ. ನಾವು ಬಂದ ಘಟ್ಟದ ದಾರಿ ೨೦೦೦ ಅಡಿಗಳಷ್ಟು ಏರಿದರೆ ಮುಂದಣ ದಾರಿ ನೂರಿನ್ನೂರು ಅಡಿ ಇಳಿಯುತ್ತದೋ ಏನೋ. ಆದರೂ ಮುಂದಣ ದಾರಿ ಹತ್ತಿಪ್ಪತ್ತು ಮೈಲು ದೂರದ ತನಕವೂ ಗುಡ್ಡಗಳ ಮಗ್ಗುಲುಗಳ ಮೂಲಕ ಮುಂದುವರಿಯುತ್ತದೆ. ಅವೆಲ್ಲ ಹಸುರು ಹಚ್ಚೆ ಬೆಳೆದ ಗುಡ್ಡಗಳು ; ಗಿಡ ಮರಗಳಿಂದ ಕೊಬ್ಬಿ ಮೆರೆಯುವಂಥವು.

ಅನಂತರ ಮಾತ್ರ ಗುಡ್ಡಗಳ ಸಂಖ್ಯೆ ಕಡಿಮೆಯಾಗುತ್ತದೆ ; ಅವುಗಳ ಎತ್ತರವೂ ಕಡಿಮೆಯಾಗುತ್ತದೆ. ಅವುಗಳ ಮೇಲಿನ ಸಸ್ಯಸಮೃದ್ಧಿಯೂ ಕಡಿಮೆಯಾಗುತ್ತದೆ. ಹೆಚ್ಚು ಕಡಿಮೆ ಮೂಡಣಕ್ಕೆ ಸರಿದಂತೆ ನೆಲವೂ ಚಪ್ಪಟೆಯಾಗುತ್ತ ಹೋಗುತ್ತದೆ. ಕರ್ನಾಟಕದ ಪೂರ್ವ ಭಾಗದ ಈ ಸೆರಗನ್ನು ಪ್ರಸ್ಥಭೂಮಿ ಇಲ್ಲವೆ ಪೀಠಭೂಮಿ ಎಂದು ಕರೆಯುವುದುಂಟು. ಅವನ್ನೆಲ್ಲ ಬಯಲು ಸೀಮೆ ಎನ್ನುವುದು ಜನರ ವಾಡಿಕೆಯ ಮಾತು. ನಾಡಿನ ಹೆಚ್ಚಿನ ಅಂಶ ೨೦೦೦ ದಿಂದ ೩೦೦೦ ಅಡಿ ಉನ್ನತಿಯುಳ್ಳ ಸಾಕಷ್ಟು ಸಮತಟ್ಟಾದ ಭೂಮಿ. ಅಲ್ಲಿ ಕಣ್ಣು ಚಾಚಿದಷ್ಟು ದೂರಕ್ಕೂ ಅಂಥ ಚಪ್ಪಟೆ ನೆಲವೇ ಕಾಣಿಸುವುದು ; ಅದರ ಮೇಲೆ ವರ್ಷದ ಕೆಲವು ತಿಂಗಳಲ್ಲಿ ಗಾಳಿ ರೊಂಯ್ ರೊಂಯ್ ಬೀಸುತ್ತಲೇ ಇರುತ್ತದೆ. ಈ ಸ್ಥಳ ಕೂಡ ಏನೇನೂ ಏರು ತಗ್ಗಿಲ್ಲದ ನೆಲವಲ್ಲ. ಮೆಲ್ಲನೆ ಏರುವ, ಮೆಲ್ಲನೆ ಇಳಿಯುವ ನೆಲ ಇಲ್ಲಿನದು. ಅದರ ನಡು ನಡುವೆಯೂ ಅಲ್ಲೊಂದು ಇಲ್ಲೊಂದು ಗುಡ್ಡಗಳನ್ನೂ, ಬೆಟ್ಟಗಳನ್ನೂ ಕಾಣಬಹುದು. ಆ ಗುಡ್ಡಗಳಲ್ಲಿ ಹಸಿರು ಕಡಿಮೆ. ಕಲ್ಲು ಬಂಡೆಗಳೇ ಹೆಚ್ಚು. ಕರ್ನಾಟಕದ ಪಡುವಣ ಭಾಗಕ್ಕೂ ಈ ಮೂಡಣ ಭಾಗಕ್ಕೂ ಯಾಕಷ್ಟು ವ್ಯತ್ಯಾಸ ? ನಿಮ್ಮ ಊರಿನಲ್ಲಿ ನೀವು ಒಮ್ಮೆಗೇ ಬಿರುಸಿನ ಜಡಿಮಳೆ ಬಡಿಯುವುದನ್ನು ಕಂಡಿ

ಲ್ಲವೇ ? ಒಂದೆರಡು ಘಂಟೆಯ ಕಾಲ ಅಂಥ ಜಡಿಮಳೆ ಸುರಿಯಿತೆಂದರೆ, ಅದರ ನೀರು ನೆಲದ ಮೇಲೆ ಬಿದ್ದು ಹರಿಯುವಾಗ ಅಲ್ಲಿರುವ ಧೂಳು, ಮಣ್ಣುಗಳನ್ನೆಲ್ಲ ಕೊಚ್ಚಿ ಒಯ್ಯುತ್ತದೆ. ಹರಿಯುವ ಮಳೆ ನೀರು ಕೆಂಪು ರಾಡಿಯಾಗುತ್ತದೆ. ನೆಲದ ಪಾಲಿಗೆ ಅಷ್ಟೊಂದು ಮಣ್ಣು ನಷ್ಟವಾದಂತೆಯೇ ಸರಿ. ಒಂದೇ ಮಳೆಗೆ ಹೀಗಾದರೆ-ವರ್ಷ, ವರ್ಷ, ಯುಗ, ಯುಗಗಳ ಉದ್ದಕ್ಕೂ ಮಳೆ ಬೀಳುವಾಗ-ಗುಡ್ಡಗಳ ಮಣ್ಣೆಲ್ಲ ಕೊಚ್ಚಿ ಹೋಗಿ ಮೈದಾನವಾದೀತು ; ಮೈದಾನ ಭೂಮಿ ಕೊರೆದು ಕಣಿವೆಯಾದೀತು.

ಕನ್ನಡ ನಾಡಿನ ಸಮುದ್ರ ಕರಾವಳಿಗೆ ವರ್ಷದ ನಾಲ್ಕು ತಿಂಗಳಲ್ಲಿ ೧೩೦ ಇಂಚು ಮಳೆ ಬಡಿಯುತ್ತದೆ. ಹಿಂದೂಸಾಗರದ ನೀರು ಆವಿಯಾಗಿ ಬಾನನ್ನೇರಿ, ಗಾಳಿ ಅದನ್ನು ಪಶ್ಚಿಮದಿಂದ ಪೂರ್ವ ದಿಕ್ಕಿಗೆ ಸಾಗಿಸಿ ತರುವಾಗ ಸಹ್ಯಾದ್ರಿಯ ಗೋಡೆ ಆ ಗಾಳಿ ಮುಗಿಲುಗಳಿಗೆ ಅಡ್ಡವಾಗುತ್ತದೆ. ಅಲ್ಲಿನ ಗಿಡ ಮರಗಳ ತಂಪು, ಮುಗಿಲನ್ನು ತಣಿಸಿ ಮಳೆ ಬರಿಸುತ್ತದೆ. ಆ ಸಹ್ಯಾದ್ರಿಯ ಗೋಡೆಯ ಮೇಲೆ ವರ್ಷಕ್ಕೆ ೩೦೦ ಇಂಚಿಗಿಂತಲೂ ಹೆಚ್ಚು ಮಳೆ ಬಿದ್ದೀತು. ಈ ಗೋಡೆಯಿಂದ ಬಲು ಎತ್ತರಕ್ಕೆ ಹಾರಿ ಹೋಗುವ ಮೋಡಗಳು, ಹಾಗೆಯೇ ಮುಂದಕ್ಕೆ ಹೋಗುತ್ತಿರುತ್ತವೆ. ಅವನ್ನು ಹನಿಸುವ ತಂಪಿಗೆ ಕಾರಣವಾದ ಗಿಡಮರಗಳ ಸಮೃದ್ಧಿ ಕಡಿಮೆಯಾದಲ್ಲೆಲ್ಲ ಮಳೆ ಬಂದರೆ ಬಂತು ; ಇಲ್ಲವಾದರೆ ಇಲ್ಲ. ಕರ್ನಾಟಕದ ಕರಾವಳಿಯಲ್ಲಿ ವರ್ಷದ ಸರಾಸರಿ ಮಳೆ ೧೩೦ ಇಂಚಿದ್ದರೆ, ಉಳಿದ ಹೆಚ್ಚಿನ ಪ್ರದೇಶದಲ್ಲಿ ಬರಿಯ ಮೂವತ್ತು ಇಂಚೂ ಮಳೆ ಬೀಳುವುದಿಲ್ಲ. ಗುಲ್ಬರ್ಗ, ರಾಯಚೂರು, ಬಳ್ಳಾರಿ, ಚಿತ್ರದುರ್ಗದಂಥ ಜಿಲ್ಲೆಗಳಲ್ಲಿ ವರ್ಷದಲ್ಲಿ ಇಪ್ಪತ್ತು ಇಂಚು ಮಳೆ ಬಿದ್ದರೂ ದೊಡ್ಡದೇ.

ಭೂಮಿಯ ಮೇಲೆ ಹೀಗೆ ಮಳೆ ಬೀಳುವುದು ನಿನ್ನೆಯಿಂದ ಮೊನ್ನೆಯಿಂದಲ್ಲವಲ್ಲ. ಮಿಲಿಯ ಮಿಲಿಯ ವರ್ಷಗಳಿಂದ ಹಾಗೆ ಬೀಳುತ್ತಲೇ ಬಂದಿದೆ. ಆ ರೀತಿ ಮಳೆ ಬಿದ್ದು, ಬಿದ್ದು, ಮಣ್ಣು ಕೊರೆದು ಎಷ್ಟೆಷ್ಟೋ ಪರ್ವತಗಳು ತಮ್ಮ ಎತ್ತರ ಕಳೆದುಕೊಂಡಿವೆ. ಬಯಲು ನೆಲ ಕೊರೆದು ಆಳವಾದ ಕಣಿವೆಗಳಾಗಿವೆ. ಯುಗಮಾನದ ಮಳೆ ನೀರಿನ ಪ್ರವಾಹ ಬಂಡೆಗಳನ್ನೂ ಕೊರೆದು ಹೋಗಿರುತ್ತದೆ. ಭೂಮಿಯ ಮೇಲ್ಮೈಮುಖ



ಕೆಮ್ಮಣ್ಣು ಗುಂಡಿ ಕೃಷ್ಣರಾಜೇಂದ್ರ ಗಿರಿಧಾಮ

ಹೀಗೆ ಮಳೆಯಿಂದ ಹೆಚ್ಚಾಗಿ, ಗಾಳಿಯಿಂದ ಸ್ವಲ್ಪ ಕೊರೆದು ಇದು ನಮಗೆ ಕಾಣಿಸುವ ಚಿತ್ರ ವಿಚಿತ್ರ ಆಕಾರವನ್ನು ತಾಳಿದೆ.

ಬಿದ್ದ ಮಳೆ ನೀರೆಲ್ಲ ಏನಾಗುತ್ತದೆ? ಸ್ವಲ್ಪ ಅಂಶ ನೆಲದೊಳಕ್ಕೆ ಇಂಗುತ್ತದೆ. ಉಳಿದ ಅಂಶ ಥಟ್ಟನೆ ಹರಿದು ಎತ್ತರದಿಂದ ತಗ್ಗಿಗೆ ಬರುತ್ತದೆ. ನದಿಗಳು, ತೊರೆಗಳು, ಹಳ್ಳಗಳು ಎಂಬುವೆಲ್ಲ ಎತ್ತರದಿಂದ ತಗ್ಗಿಗೆ ಹರಿಯುವ ನೀರಿನ ಪ್ರವಾಹಗಳಷ್ಟೆ. ನೆಲ ಮಳೆಯ ನೀರನ್ನು ಹೆಚ್ಚಾಗಿ ಹೀರಿಕೊಂಡರೆ ಮಳೆಗಾಲ ಕಳೆದ ಮೇಲೆಯೂ, ನೆಲದಿಂದ ಆ ನೀರು ಒಸರಿ ಹರಿದು ನದಿಗಳನ್ನು ಕೂಡಿಕೊಳ್ಳುತ್ತದೆ. ನದಿಗಳು ತಮ್ಮ ನೀರನ್ನೆಲ್ಲ ಹೊತ್ತು, ಇನ್ನೂ ತಗ್ಗಿನಲ್ಲಿರುವ ಸಮುದ್ರಕ್ಕೆ ಮುಟ್ಟಿಸುತ್ತವೆ. ಮುಂದೆ ಆ ಸಮುದ್ರದ ನೀರೇ ಕಾದು ಮುಗಿಲಾಗಿ ಇನ್ನೊಮ್ಮೆ ಬಾನನ್ನೇರುತ್ತದೆ; ಮಳೆಯಾಗಿ ಭೂಮಿಗೆ ಬೀಳುತ್ತದೆ.

ನಮ್ಮ ನಾಡಿನ ಸಹ್ಯಾದ್ರಿಯ ಗೋಡೆಯ ಮೇಲೆ ಬಿದ್ದ ಅಷ್ಟೊಂದು ಮಳೆ ನೀರು ಎಲ್ಲಿಗೆ ಹೋದೀತು ಅಥವಾ ಎಲ್ಲಿಗೆ ಹೋಗಬೇಕು? ಆ ಗೋಡೆಯಿಂದ ಆಚೀಚಿನ ತಗ್ಗಿಗೆ ಹರಿಯಲೇ ಬೇಕಷ್ಟೆ. ಅದರ ಪಡುವಣದ ತಗ್ಗು ಬಹಳ ಆಳವಾದದ್ದು. ಅಲ್ಲಿಗೂ, ಸಮುದ್ರಕ್ಕೂ ಇರುವ ದೂರ ಕಡಿಮೆ. ಈ ಕಾರಣದಿಂದ ಸಹ್ಯಾದ್ರಿಯ ಮೇಲೆ ಬಿದ್ದ ನೀರು ಅವಸರ, ಅವಸರವಾಗಿ ಅದರ ಪಡುವಣ ಗೋಡೆಯಿಂದ ಕೆಳಕ್ಕೆ ಧುಮುಕುತ್ತದೆ. ಹೀಗೆ ಧುಮುಕುವ ನೀರಿನ ಸೆಲೆಗೆ ಅಬ್ಬಿ, ತಡಸಲು ಅಥವಾ ಜಲಪಾತ ಎಂದು ಕರೆಯುತ್ತಾರೆ. ಹಾಗೆ ಒಂದು ನದಿ ಒಮ್ಮೆಗೇ ಧುಮುಕಿ ಕೆಳಕ್ಕೆ ಬಂತೆಂದರೆ ಅಲ್ಲಿನ ನೆಲವೂ ತೀಕ್ಷ್ಣವಾಗಿ ಇಳಿಯುವುದರಿಂದ ಅದು ಸಾಕಷ್ಟು ವೇಗದಿಂದ ಸಮುದ್ರದ ಕಡೆಗೆ ಧಾವಿಸುತ್ತದೆ.

ಸಹ್ಯಾದ್ರಿಯ ಬೆಟ್ಟದ ಬೆನ್ನಿನ ಮೂಡಣಕ್ಕೆ ಬಿದ್ದ ನೀರು ಸಹ ಅವಸರಿಸಿ, ತಗ್ಗಾದ ನೆಲವನ್ನು ಹುಡುಕುತ್ತ, ಸಮುದ್ರದ ಕಡೆಗೆ ಧಾವಿಸುತ್ತದೆ. ಆ ಮೂಡಣದ ನದಿಗಳು ಮೊದಲು ಹರಿದು ಬಯಲು ಸೀಮೆಯನ್ನು ಸೇರುವಾಗ ಅಲ್ಲಿನ ನೆಲ ಚಪ್ಪಟೆಯಾದುದರಿಂದ, ಅವುಗಳ ವೇಗ ಕಡಿಮೆಯಾಗುತ್ತದೆ. ಆ ನದಿಗಳು ನಮ್ಮ ಕನ್ನಡ ದೇಶವನ್ನು ದಾಟಿ ಮತ್ತೂ ನೂರಿನ್ನೂರು ಮೈಲು ಹರಿದು ಮುಂದೆ ಬಂಗಾಲ ಅಖಾತವನ್ನು ಕೂಡಿಕೊಳ್ಳುತ್ತವೆ. ಗೋದಾವರಿ, ಕೃಷ್ಣಾ, ತುಂಗಾ, ಕಾವೇರಿಯಂಥ ನದಿಗಳು ಹಾಗೆ ಬಲು ಉದ್ದ ಪಯಣ ಮಾಡುವ ಮುಂದಗಾಮಿ ನದಿಗಳು.

ಪಶ್ಚಿಮ ಸಮುದ್ರವನ್ನು ಸೇರುವ ಕಾಳಿ, ಅಘನಾಶಿನಿ, ಶರಾವತಿ, ವಾರಾಹಿ, ನೇತ್ರಾವತಿಯಂಥ ನದಿಗಳು ವೇಗದಲ್ಲಿ ಓಡುವ ಗಿಡ್ಡನೆಯ ನದಿಗಳು.

ಏತಕ್ಕೆ ಇಷ್ಟೆಲ್ಲ ಹೇಳಿದೆನೆಂದರೆ-ಕನ್ನಡ ನಾಡಿನ ಚೆಲುವನ್ನು ನೋಡಬೇಕೆನ್ನುವವರು ಅದರ ಸಮುದ್ರ, ನದಿ, ಬೆಟ್ಟ, ಅರಣ್ಯ, ಕಣಿವೆ, ಕೊರಕಲು ಇವನ್ನೆಲ್ಲ ಹುಡುಕಿ ಹೋದದ್ದಾದರೆ ಅಲ್ಲಿ ಕಾಣಸಿಗುವ ಚಂದಕ್ಕೆ 'ಇಲ್ಲೇ ಇದ್ದು ಬಿಡುವ' ಅನಿಸೀತು. ಕನ್ನಡ ನಾಡಿನ ಕಡಲ ಕರಾವಳಿಯೆಂಬುದು ಸುಮಾರು ೨೦೦ ಮೈಲುಗಳಷ್ಟು ಉದ್ದದ ಅತ್ಯಂತ ಮನೋಹರವಾದ ಭೂಮಿಯ ಸೆರಗು. ಅದರ ಯಾವೊಂದು ಸ್ಥಳದಲ್ಲಿ ಹೋಗಿ ನಿಂತರೂ, ನಿಮ್ಮ ಕಣ್ಣಿಗೆ ಅದರ ಕಡಲ ದಂಡೆ, ಆ ದಂಡೆಯ ಮುಂದಕ್ಕೆ ಹರಡಿ ಹಬ್ಬಿದ ಸಮುದ್ರ ಬಲು ಸೊಗಸಿನ ನೋಟವನ್ನು ಒದಗಿಸುತ್ತವೆ. ಅಂಥ ಕಡಲಿನ ಭಾಗ್ಯ ಎಲ್ಲರಿಗೂ ಸಿಗಲಾರದು. ಒಂದು ಕೊಳವನ್ನೋ, ಸರೋವರವನ್ನೋ ಕಾಣುವುದಕ್ಕೂ, ಸಾವಿರಾರು ಮೈಲು ಉದ್ದಗಲದ ಸಾಗರದ ಭಾಗವಾದ ಸಮುದ್ರವನ್ನು ಕಾಣುವುದಕ್ಕೂ ತುಂಬ ಅಂತರವಿದೆ. ಆ ಸಮುದ್ರದ ಮೈ ಎಷ್ಟು ದೂರಕ್ಕೆ ಹೋದರೂ ಚಪ್ಪಟೆಯಾಗಿಯೇ ಕಾಣಿಸುತ್ತದೆ. ಅಲ್ಲಿನ ನೀರು ಬಾನಿನ ನೀಲ ಬಣ್ಣವನ್ನು ಪ್ರತಿಬಿಂಬಿಸುವುದರಿಂದ, ಅದೂ ನೀಲವಾಗಿ ಕಾಣಿಸುತ್ತದೆ. ಸಮುದ್ರದಲ್ಲಿ ಕೂಡ ಪಾಚಿಯಂಥ ಸಸ್ಯಕಣಗಳು ಹಬ್ಬಿ ಬೆಳೆಯುವುದರಿಂದ ಕಡಲಿನ ನೀಲ ಬಣ್ಣಕ್ಕೆ ಒಂದಿಷ್ಟು ಹಸಿರು ಛಾಯೆಯೂ ಸೇರುತ್ತದೆ. ಇಂಥ ವಿಶಾಲ ನೀಲ ಹಸುರು ಕಡಲಿನ ಮೇಲೆ ಬಲು ದೂರದಿಂದ ಗಾಳಿ ಒಂದಲ್ಲ ಒಂದು ದಿಕ್ಕಿನಿಂದ ಬೀಸುತ್ತಿರುತ್ತದೆ. ಗಾಳಿ ಬೀಸುವಾಗ ನಿಮ್ಮ ಊರಿನ ಕೆರೆಯ ಮೇಲ್ಮೈ ತಳಮಳಗೊಂಡು, ಕಿರಿಯ ಕಿರಿಯ ಅಲೆಗಳು ಹುಟ್ಟಿ ಅವು ದಂಡೆಗೆ ಸರಿದು ಬಡಿಯುವುದನ್ನು ನೀವು ಕಂಡಿಲ್ಲವೇ ? ಇದೋ ! ನೂರು, ಸಾವಿರ ಮೈಲು ವಿಸ್ತಾರದ ನೀರಿನ ಹರಹು. ಅದರ ಮೇಲೆ ಒಮ್ಮೊಮ್ಮೆ ಗಾಳಿ ಮಂದವಾಗಿ ಬೀಸಿದರೆ, ಒಮ್ಮೊಮ್ಮೆ ನಿಂತು ನಿಂತು ಬೀಸುತ್ತದೆ ; ಕೆಲವೊಮ್ಮೆ ಅದೇ ಗಾಳಿಯ ರಭಸ ಹೆಚ್ಚಿ ಬಿರುಗಾಳಿಯಾಗುತ್ತದೆ. ಇನ್ನೂ ಅಬ್ಬರ ಹೆಚ್ಚಿದರೆ, ಅದನ್ನು ತುಫಾನು ಎಂದು ಕರೆಯುತ್ತಾರೆ. ಇಂಥ ಗಾಳಿಗಳಿಂದಾಗಿ ಸಮುದ್ರದ ಮೇಲ್ಮೈ ಎಂದೂ ಶಾಂತವಾಗಿರುವುದಿಲ್ಲ. ಎಷ್ಟೆಷ್ಟೋ ದೂರದಿಂದ ಬೀಸುವ ಗಾಳಿ ಕಡಲಿನ ಮೇಲ್ಮೈಯನ್ನು ತೀಡುವಾಗ ದೊಡ್ಡ ದೊಡ್ಡ ಅಲೆಗಳು ಉಂಟಾಗುತ್ತವೆ. ಒಂದೊಂದು ಅಲೆ

ಹತ್ತು ಇಪ್ಪತ್ತು ಅಡಿ ಎತ್ತರಕ್ಕೇರಬಹುದು. ಒಂದು ಅಲೆಯಿಂದ ಇನ್ನೊಂದು ಅಲೆಯ ದೂರ ನೂರು ಅಡಿ ಆಗಬಹುದು. ಬಿರುಗಾಳಿಯ ರಭಸಕ್ಕೆ ಸಿಕ್ಕಿದ ನೀರಿನ ಅಲೆಗಳು ೫೦-೬೦ ಅಡಿ ಎತ್ತರದ ನೀರಿನ ದಂಡೆಗಳಂತೆ ಮುಂದೊತ್ತಿ ಸರಿಯುತ್ತವೆ : ಹಾಗೆ, ನೆಲ ಸಿಗುವ ತನಕವೂ ಅವು ಹರಿದು ಬರುತ್ತವೆ. ಅವಕ್ಕೆ ಕಡಲಿನ ದಂಡೆ ಅಡ್ಡ ಬರುತ್ತಲೇ ಆ ಅಲೆಗಳು ಅದರ ಮೇಲೆ ಅಪ್ಪಳಿಸಿ ತಮ್ಮ ಅಬ್ಬರವನ್ನೆಲ್ಲ ಕಳೆದುಕೊಳ್ಳುತ್ತವೆ. ಈ ಚಂದ ನೋಡುವುದಕ್ಕೆ ನೀವು ಕಡಲ ದಂಡೆಗೇ ಹೋಗಿ ನಿಲ್ಲಬೇಕು. ಆ ದಂಡೆ ಬಿಳಿಯ ಮರಳಿನ ಕಣಗಳಿಂದ ಕೂಡಿದ ದಪ್ಪನೆಯ ಹಾಸಿಗೆಯಂತಿರುತ್ತದೆ. ನೀವು ನೀರಿನ ಎಟುಕಿಗೆ ತುಸು ದೂರದಲ್ಲಿ ಒಂದಿಷ್ಟು ಎತ್ತರದಲ್ಲಿ ನಿಂತು ನೋಡಿ. ಆಗ ನಿಮಗೆ ಹತ್ತಿಪ್ಪತ್ತು ಮೈಲು ದೂರದ ಬಾನಿನ ಅಂಚು ಕಾಣಿಸುತ್ತದೆ. ಆ ಅಂಚಿನಿಂದ ನೀವು ಇರುವಲ್ಲಿಯ ತನಕ ಹಾಸಿದ ನೀರಿನ ಮೇಲ್ಮೈ ತಳಮಳಗೊಳ್ಳುತ್ತ, ಸೂರ್ಯನ ಬೆಳಕನ್ನು ಹೊಮ್ಮಿಸುತ್ತ ನಗುವಿನ ಹಬ್ಬದಂತೆ ಕಾಣಿಸುತ್ತದೆ. ಆ ನೀರಿನ ಭಾಗ ನಿಮಗೆ ಸಮೀಪವಾದಂತೆ ಇನ್ನೊಂದೇ ಚಿತ್ರ ಗೋಚರವಾಗುತ್ತದೆ. ಬಲು ದೂರದಿಂದ ನೀರಿನ ಅಲೆಗಳು ಎತ್ತರದ ಗೋಡೆಗಳಂತೆ ಒಂದರ ಹಿಂದೆ ಒಂದಾಗಿ ನಮ್ಮ ಕಡೆಗೆ ಧಾವಿಸಿ ಬರತೊಡಗುತ್ತವೆ. ಅವುಗಳಲ್ಲಿ ತೀರ ಮುಂದಕ್ಕಿರುವ ನೀರಿನ ಅಲೆಗಳು, ಇನ್ನಷ್ಟು ಎತ್ತರಕ್ಕೆ ಏರಿ, ಅವುಗಳ ಬೆನ್ನು ಕತ್ತಿಯ ಬಾಯಂತೆ ಮೊನಚಾಗುತ್ತವೆ. ಅಂತ ಮೊನಚು ಅಲೆ ಮುಂದಕ್ಕೆ ಬರುತ್ತ, ನಿಮ್ಮ ದಿಕ್ಕಿಗೆ ಮಗುಚತೊಡಗುತ್ತದೆ. ಅದು ಹಾಗೆ ಮುರಿಯತೊಡಗಿದಾಗ ಅದರ ಕಡಿ ಬೆಳ್ಳಗಿನ ನೊರೆಯಾಗುತ್ತದೆ. ಆ ನೊರೆಯು ಸಾಲು ನೀರಿನ ಗೋಡೆಯೊಂದರ ಮೇಲೆ ಅವಸರಿಸಿ ಓಡುವ ಹಾಗೆ ಕಾಣಿಸುತ್ತದೆ. ಅಂಥ ನೀರಿನ ಗೋಡೆ ನಿಮಗೆ ತೀರ ಸಮೀಪದಲ್ಲಿ ಮೊನಚಾಗಿ ಏರಿ ಮುಂದಕ್ಕೆ ಬಾಗಿ, ಧೋ ಎಂದು ಮೊರೆದು, ಧೊಪ್ಪೆಂದು ಮಗುಚಿತಾದರೆ ಆ ಸದ್ದೇನು ? ಗದ್ದಲವೇನು ? ಮೊರೆಯುವ ನೀರು ಉರುಳಿ ಬಿದ್ದು ನಾನಾ ಆಕಾರಗಳಲ್ಲಿ ಜಿಗಿದು, ಹಾರಿ, ಉಕ್ಕಿ, ಸೊಕ್ಕಿ ನಿಮ್ಮ ಕಡೆಗೆ ಧಾವಿಸಿ ಬರುವ ಬಿರುಸೇನು : ಅದು ವೇಗದಿಂದ ಬಂದು, ಇಳಕಲು ಮರಳಿನ ದಂಡೆಯ ಮೇಲೆಯೂ ಹರಿದು ನೀವು ನಿಂತಲ್ಲಿಗೇ ಬಂದೀತು. ಬಂದು ಚೆದರಿ, ಚಾಪೆಯಂತೆ ಹರಡೀತು. ಹಾಗೆ ಬಂದ ನೀರು ಮತ್ತೂ ಮುಂದುವರಿಸಲಾರದೆ ಬಂದಂತೆ ಮರಳುತ್ತದೆ ;



ಗೋಕರ್ಣದಲ್ಲಿ ಸಮುದ್ರ ತೀರ

ಸುದ್ದಿಯಿಲ್ಲದೆ, ಒಂದಕ್ಕೆ ಇಳಿದು ಹೋಗುತ್ತದೆ. ಅದರ ಬೆನ್ನಿಗೆ ಮತ್ತೊಂದು ಅಲೆ ಬರುತ್ತದೆ; ಅದು ಇದೇ ರೀತಿ ಮುರಿದು ಮರಳಿನ ದಂಡೆಯ ಕಡೆಗೆ ಓಡುತ್ತದೆ. ಹೀಗೆ ಮುರಿಯುವ ನೀರಿನ ಅಲೆಗಳನ್ನು 'ತೆರೆ' ಎಂದು ಕರೆಯುತ್ತಾರೆ.

ನಾಟಕದ ರಂಗಸ್ಥಳದಲ್ಲಿ ಎದುರಿಗೆ ಕಟ್ಟಿದ ತೆರೆಯನ್ನು ಒಂದು ಮಗ್ಗುಲಿನಿಂದ ಇನ್ನೊಂದು ಮಗ್ಗುಲಿಗೆ ಎಳೆದುಕೊಂಡು ಹೋಗುತ್ತಾರಲ್ಲ. ಈ ತೆರೆ ಅದಕ್ಕಿಂತ ಸೊಗಸಾದ, ಗಂಭೀರವಾದ, ಮುರಿಯುವ ನೀರಿನ ಹಾಳೆ: ಅದು ಮುರಿದಾಗ ಬೆಳ್ಳಗಿನ ಹೂವುಗಳಿಂದಲೇ ನೆಯ್ದು ಮಾಡಿದಂತೆ ಕಾಣಿಸುವ ತೆರೆ. ಒಂದು ಕ್ಷಣವೂ ಸುಮ್ಮನಿರದ, ತುದಿಮೊದಲಿಲ್ಲದ ಅಲೆಗಳಿಂದಾಗಿ, ಕಡಲು ಸದಾ ಮೊರೆಯುತ್ತಲೇ ಇರುತ್ತದೆ. ನಿತ್ಯದಲ್ಲಿ ಅದರ ಕೂಗು ಮೂರು ಮೈಲು ದೂರ ಕೇಳಿಸಬಹುದು. ಬಿರುಗಾಳಿಯೋ, ತುಫಾನೋ, ತೊಡಗಿತೆಂದರೆ ಆ ತೆರೆಯು ಅಯ, ಅಳತೆ ತಪ್ಪುತ್ತದೆ. ಅಲೆಗಳು ಹೆಬ್ಬಲೆಗಳಾಗುತ್ತವೆ. ತೆರೆ ಹೆದ್ದರೆಯಾಗುತ್ತದೆ. ಅದರ ಉಕ್ಕು ಸೊಕ್ಕು ಒಂದಕ್ಕೆ ನೂರಾಗುತ್ತದೆ. ಅದರ ಮೊರೆತ ಕೇಳಿ ಭಯ ಹುಟ್ಟಿಸುವಂಥ ಘರ್ಜನೆಯೋ ಆಗುತ್ತದೆ. ಕಡಲಿನ ಮೇಲೆ ಬೇರೆ ಬೇರೆ ದಿಕ್ಕುಗಳಿಂದ ಗಾಳಿ ಬೀಸಿದರಂತು–ಒಂದು ದಿಕ್ಕಿನಿಂದ ಬರುವ ತೆರೆಗಳಿಗೂ, ಇನ್ನೊಂದು ದಿಕ್ಕಿನಿಂದ ಬರುವ ನೀರಿನ ದಂಡೆಗಳಿಗೂ ಪ್ರತ್ಯಕ್ಷ ಯುದ್ಧವೇ ಆಗುತ್ತದೆ. ಅವುಗಳ ನಡುವೆ ಸಿಕ್ಕಿದ ಪುಟ್ಟ ದೋಣಿಗಳು, ದೊಡ್ಡ ಹಡಗುಗಳು–ಮೇಲೆ ಕೆಳಗೆ, ಆಚೆ, ಈಚೆ ಬೆಂಡಿನ ತುಂಡುಗಳಂತೆ ತೊಳಲಾಡುತ್ತದೆ.

ನೀವು ಕುಳಿತ ತಾವು ಮರಳಿನ ಹಾಸು ದಂಡೆಯಾಗಿರುವ ಬದಲು ಹೆಬ್ಬಂಡೆಗಳ ಎತ್ತರದ ಜಾಗವಾದರೆ ? ನಮ್ಮ ಕರಾವಳಿಯ ಬೈಂದೂರು, ಭಟ್ಕಳ, ಮುರ್ಡೇಶ್ವರ, ಕಾರವಾರ ಮೊದಲಾದ ಕಡೆಗಳಲ್ಲಿ ಗುಡ್ಡಗಳು ಕಡಲಿಗೆ ಚಾಚಿನಿಂತ ತಾವುಗಳಾಗಿವೆ. ಅಂಥಲ್ಲಿ ಹೆಬ್ಬಂಡೆಗಳ ರಾಶಿ ಕಡಲಿಗೆ ತಾಗಿ ಕಾಣಿಸುತ್ತದೆ. ಅವುಗಳ ಮೇಲೆ ಕಡಲಿನ ತೆರೆಗಳು ಪ್ರತಿ ನಿಮಿಷವೂ ಎಂಬಂತೆ ಬಂದು ಅಪ್ಪಳಿಸುವ ನೋಟ ಘನ ಗಂಭೀರ. ನೀರಿಗಿರುವ ಶಕ್ತಿ ಎಷ್ಟೆಂದು ಆಗ ನಿಮಗೆ ಗೊತ್ತಾಗುತ್ತದೆ. ಅಂಥ ತೆರೆಗಳು ಬಂಡೆಗಳಿಗೆ ಬಡಿದಾಗ ಹತ್ತೈವತ್ತು ಅಡಿ ಎತ್ತರಕ್ಕೆ ನೀರು ನಾಲ್ಕು ಸುತ್ತ ಸಿಡಿಯುತ್ತದೆ. ಅಪ್ಪಳಿಸಿದ ನೀರು ನಮ್ಮನ್ನು ಬಡಿದರೆ ನಾವು ಉರುಳಿ ಬಿದ್ದೇವು. ಅಂಥ

ನೀರಿನ ಪೆಟ್ಟನ್ನು ಗುಡ್ಡಗಳಷ್ಟೇ ತಡೆದಾವು. ಅವೂ ಕೂಡ ದೀರ್ಘಾವಧಿ ಯಲ್ಲಿ ಕೊರೆದು, ಉರುಳಿ ಬೀಳುತ್ತವೆ.

ಕರಾವಳಿಯ ಕಡಲ ತೀರದ ಮರಳಿನ ಅಂಚನ್ನು 'ಬೇಲೆ' ಎಂದು ಕರೆ ಯುತ್ತಾರೆ. ನೀರು ಹರಿದು, ಹರಿದು, ಅಲ್ಲಿನ ಮರಳು ಒದ್ದೆಯಾಗಿ, ಗಟ್ಟಿ ನೆಲದಂತೆ ಕಾಣಿಸುತ್ತದೆ. ಅದರ ಮೇಲೆ ಓಡಾಡುವುದೇ ಒಂದು ಚಂದ. ಹಾಗೆ ಓಡುವ ಹುಚ್ಚು ನಿಮಗೆ ತನ್ನಂತೆಯೇ ಬಂದೀತು. ನೀವು ಆ ಬೇಲೆಯ ಮೇಲೆ ನಡೆಯುತ್ತ, ಓಡುತ್ತ ಹೋಗುವಾಗ-ನೆಲದ ಮೇಲೆ ದೃಷ್ಟಿ ಹರಿಯಿಸಿದರೆ ನಿಮ್ಮ ಕಣ್ಣಿಗೆ ನೂರಾರು ಚಿಕ್ಕ, ಪುಟ್ಟ ಏಡಿಗಳು ಓಡಾಡು ವುದು ಕಾಣಿಸುತ್ತದೆ.

ನೀರಿನ ಎಟುಕಿಗೆ ದೂರವಾದ ನೆಲ ಬರಿಯ ಉಸುಬು (ಮರಳು); ಅದರಲ್ಲಿ ಒಂದಿಷ್ಟೂ ಕೊಳೆಯಿಲ್ಲ. ಕಾಲೂರಿದರೆ ಆ ನೆಲ ಕುಸಿಯುತ್ತದೆ. ಅಂಥ ಮರಳಿನಲ್ಲಿ ಕುಳಿತು ಎಷ್ಟು ಆಟವಾಡಿದರೂ ತೃಪ್ತಿ ಬರದು. ಆ ಮರಳಿನ ಬೇಲೆಯಲ್ಲಿ ಹುಡುಕಿ ಹೋದಿರಾದರೆ ಎಷ್ಟೆಷ್ಟೋ ತೆರನ ಚಿಪ್ಪು ಗಳು ಕಾಣಿಸುತ್ತವೆ: ಪುಟ್ಟ ಶಂಖಗಳು, ಕವಡೆಗಳು, ಕಡೆಗೋಲಿನಂತಿರು ವುವು, ಕೊಂಬಿನಂತಿರುವುವು, ತೊಗರಿ ಬೇಳೆ ಗಾತ್ರದವು, ಅಂಗೈ ಗಾತ್ರದವು. ಒಂದೊಂದಕ್ಕೂ ಒಂದೊಂದು ಬಣ್ಣ; ಒಂದೊಂದು ಚೆಲುವಿನ ಆಕಾರ. ಅವನ್ನು ಹೊತ್ತು ತಂದು ಮನೆಯಲ್ಲೂ ಆಡಬಹುದು. ಅದೆಲ್ಲ ಏನು ? ಅಸಂಖ್ಯ ಕಡಲ ಜೀವಿಗಳ ಮೈಯ ಹೊದಿಕೆಗಳು. ಅವನ್ನು ಚಿಪ್ಪು ಜೀವಿ ಗಳೆಂಬ ಒಂದೇ ಮಾತಿನಿಂದ ಕರೆಯಬಹುದು. ಆ ಚಿಪ್ಪುಗಳನ್ನು ಸುಟ್ಟರೆ ನುಣ್ಣನೆಯ ಬಿಳಿ ಸುಣ್ಣವಾಗುತ್ತದೆ.

ಇನ್ನೆಷ್ಟೋ ಸಮಯ ಅದೇ ಕಡಲ ಅಂಚಿನ ಮೇಲೆ ಸಾವಿರಗಟ್ಟಲೆ ಪಾರಿವಾಳದ ಆಕಾರದ, ಆದರೆ ಅದಕ್ಕಿಂತ ದೊಡ್ಡದಾದ, ಹಕ್ಕಿಗಳ ಮಂದೆಗಳನ್ನು ಕಾಣಬಹುದು, ಅವನ್ನು ಕಡಲುಕಾಗೆ ಎಂದು ಕರೆಯುವುದು ವಾಡಿಕೆ. ಅವು ಕಾಗೆಗಿಂತ ತುಸು ದೊಡ್ಡವು; ಅವುಗಳ ಹೊಟ್ಟೆ, ಕತ್ತುಗಳ ಬಣ್ಣ ಬಿಳಿದು; ರೆಕ್ಕೆ ಬೂದು! ಇಲ್ಲವೆ ಕಪ್ಪು. ಕೊಕ್ಕು ಕಪ್ಪು ಇಲ್ಲವೆ ಹಳದಿ ಬಣ್ಣದ್ದು. ಈ ಜಾತಿಯ ಹಕ್ಕಿಗಳಲ್ಲಿ ನಾಲ್ಕೆಂಟು ತೆರಗಳಿವೆ. ಅವು ಯಾವವೂ ನಮ್ಮ ದೇಶವಲ್ಲ. ಉತ್ತರ ಗೋಲಾರ್ಧದ ನಾರ್ವೆ, ಗ್ರೀನ್‌ಲ್ಯಾಂಡ್, ಅಮೆರಿಕದ ಕಡಲದಂಡೆಗಳಲ್ಲೂ, ದ್ವೀಪಗಳಲ್ಲೂ ವಾಸಿಸುವಂಥವು. ಅಲ್ಲಿ ಚಳಿಗಾಲದಲ್ಲಿ ಹಿಮ ಬೀಳುವ ಸಮಯದಲ್ಲಿ ಇರ

ಲಾರದೆ, ಹತ್ತು ಹದಿನೈದು ಸಾವಿರ ಮೈಲು ದೂರದ ಪ್ರಯಾಣ ಮಾಡಿ ನಮ್ಮ ಊರಿಗೆ ಬರುತ್ತವೆ. ಅಲ್ಲಿ ಚಳಿಗಾಲ ಕಳೆದು ವಸಂತ ಬರಲು ತೊಡಗುವಾಗ, ಅಷ್ಟೇ ದೂರ ಹಾರಿ ಹಿಂದಕ್ಕೆ ಹೋಗುತ್ತವೆ.

ಕಡಲಿನಲ್ಲಿ ಎಷ್ಟೆಲ್ಲ ಜಾತಿಯ ಜಲಚರಗಳಿವೆ! ಕರಾವಳಿಯಲ್ಲಿ ವಾಸಿಸುವ ಸಾವಿರಾರು ಬೆಸ್ತರು ದೋಣಿಗಳಲ್ಲಿ ಕುಳಿತು ಕಡಲಿಗೆ ಹೋಗಿ ಬಲೆ ಬೀಸುತ್ತಾರೆ. ಅಲ್ಲಿಂದ ತೆರ ತೆರನ ಮೀನುಗಳನ್ನೂ, ಸಿಗಡಿಗಳನ್ನೂ ಹೊತ್ತು ತರುತ್ತಾರೆ. ಅವರು ಹಾಸುವ ಕೆಲವು ಬಲೆಗಳಂತು ಒಂದೆರಡು ಫರ್ಲಾಂಗು ಉದ್ದದವು. ೫೦-೧೦೦ ಜನ ಸೇರಿ ಅಂಥ ಬಲೆಯನ್ನು ಹಾಸಿ, ಬೀಸಿ ದಂಡೆಗೆ ಎಳೆದು ತರುವಾಗ ಮೀನುಗಳ ರಾಶಿ ರಾಶಿ ಬರುತ್ತದೆ. ಅದನ್ನು ಕೊಳ್ಳೆ ಹೊಡೆಯಲು ಕಡಲುಕಾಗೆಗಳು ಹಿಂಡುಗಟ್ಟಿ ಧಾವಿಸುತ್ತವೆ. ಮೀನನ್ನು ದಂಡೆಯಲ್ಲಿ ರಾಶಿಯೊಡ್ಡಿದಾಗಲಂತು ಅವಕ್ಕೂ ಹಬ್ಬ: ಕಾಗೆ ಗಿಡುಗಗಳಿಗೂ ಹಬ್ಬವೇ.

ಚಪ್ಪಟೆಯಾದ ಕಡಲ ದಂಡೆಯ ಮೇಲೆ ಉದ್ದಕ್ಕೂ ಜನ ಮನೆಮಾಡಿಕೊಂಡಿದ್ದಾರೆ. ಬೆಸ್ತರಂತು ಅಲ್ಲಿಯೇ ವಾಸಿಸುವವರು. ಹತ್ತಿರ ಹೋದರೆ ಮಾತ್ರ ಅವರ ಮನೆಗಳು ನಿಮಗೆ ಕಾಣಿಸುತ್ತವೆ. ಇಲ್ಲದೆ ಹೋದರೆ ಅವುಗಳ ಸುತ್ತಲೂ ನಟ್ಟು ಬೆಳೆಯಿಸಿದ ತೆಂಗಿನ ಮರಗಳದ್ದೇ ಉದ್ಯಾನ ಕಾಣಿಸುತ್ತದೆ.

ಉತ್ತರ ಕನ್ನಡ ಜಿಲ್ಲೆಯ ಅನೇಕ ಕಡೆಗಳಲ್ಲಿ ಬೆಟ್ಟಗಳ ಸಾಲುಗಳು ಕಡಲ ತನಕ ಚಾಚಿವೆ—ಎಂದೆ. ಅಂಥಲ್ಲಿ ಕಡಲಿನ ಅಂಚು ಹರುಕು ಮುರುಕಾಗಿರುತ್ತದೆ. ಅದು ನೆಟ್ಟಗಿನ ತಾವಲ್ಲ. ಕಡಲಿನ ಅಂಚು ಬಿಲ್ಲಿನಂತೆ ಬಾಗಿರುವುದುಂಟು. ಅಲ್ಲಿನ ಕಡಲಿನಲ್ಲಿ ಹಸುರು ತುಂಬಿದ ಗುಡ್ಡಗಳು ಮೀಯುವುದಕ್ಕೆ ನೀರನ್ನಿಳಿದಂತೆ ಕಾಣಿಸಬಹುದು. ಕೆಲವೆಡೆ ಸಣ್ಣ ದೊಡ್ಡ ಗುಡ್ಡಗಳೇ ಕಡಲಿನಲ್ಲಿ ನಿಂತು ಮೆರೆಯುವುದುಂಟು. ಭಟ್ಕಳದ ಜಾಲಿಕುಂಡ, ಕಾರವಾರದ ಅಂಜದೀವಿ – ಅಂತಹ ಸುಂದರ ದ್ವೀಪಗಳು. ಅಲ್ಲಿಗೆ ಹೋದರೆ ನಿಮಗೆ ಕಾಣಿಸುವ ಸಮುದ್ರದ ದೃಶ್ಯ ಮತ್ತೊಂದೇ ತೆರನದು. ಸದಾ ತಳಮಳಿಸುವ ನೀಲ ಕಡಲು, ಬಿಲ್ಲಿನಂತೆ ಬಾಗಿ ಕಾಣಿಸುವ ಮರಳ ದಂಡೆ, ಅದರ ಆಚೀಗೆ ಗುಡ್ಡಗಳು, ಕಡಲು ಅಪ್ಪಳಿಸುವಲ್ಲಿ ಹೆಬ್ಬಂಡೆಗಳ ರಾಶಿ, ಮರಳ ದಂಡೆಯ ಬೆಂಗಡೆಯಲ್ಲಿ ಸುಂದರವಾದ ತೆಂಗಿನ ತೋಟಗಳು.



ಕಾರವಾರ ಸಮೀಪದ ಅಂಜದೀವಿ ದ್ವೀಪ

ಅವುಗಳ ಹಿಂದೆ ಬಯಲುಗಳು. ಅಷ್ಟು ನೀರನ್ನು ಬಿಟ್ಟು ಅವನ್ನೇ ನೋಡು-ತ್ತಿರುವ–ಎಂಬ ಆಸೆ ನಿಮ್ಮಲ್ಲಿ ಮೂಡಬಹುದು.

ತುಸು ಮೊದಲು–ಸಹ್ಯಾದ್ರಿಯ ಬೆಟ್ಟದಿಂದ ಹಲವಾರು ನದಿಗಳು ಓಡಿಬಂದು ನಮ್ಮ ಕಡಲನ್ನು ಕೂಡಿಕೊಳ್ಳುತ್ತವೆ ಎಂದಿದ್ದೆ. ಅಘನಾಶಿನಿ, ಗಂಗಾವಳಿ, ಶರಾವತಿ, ನೇತ್ರಾವತಿ ಮೊದಲಾದ ಅಂಥ ಹಲವಾರು ನದಿಗಳಿವೆ. ಆ ನದಿಗಳು ಕಡಲನ್ನು ಕೂಡಿಕೊಳ್ಳುವ ತಾವನ್ನು ಅಳಿವೆ ಎನ್ನುತ್ತಾರೆ. 'ಅಳಿ' ಎಂದರೆ ಸಾಯು ಎಂದರ್ಥ. ಕಡಲನ್ನು ಸೇರಿದ ನದಿ ಅಳಿದೇ ಹೋಯಿತಲ್ಲ. ಮುಂದೆ ಅದಕ್ಕೆ ಪಯಣವಿಲ್ಲ. ಹಾಗೆ ಒಂದು ಹೊಳೆ ಅಳಿಯುವ ಮುಂಚೆ, ಅದರ ದಾರಿಯನ್ನು ಕಂಡಿರಾದರೆ, ಹೆಜ್ಜೆ ಹೆಜ್ಜೆಗೂ ನಿಮಗೆ ಆಶ್ಚರ್ಯವಾದೀತು. ಆ ನದಿಯ ಪಯಣವೆಂಥದು–ಎಂದು ಒಂದಾದರೂ ನಿದರ್ಶನ ಕೊಡುತ್ತೇನೆ. ನಮ್ಮ ಸಹ್ಯಾದ್ರಿ ಬೆಟ್ಟದ ಮೂಡಣ ದಿಕ್ಕಿನಲ್ಲಿ ಕೆಲವೊಂದು ನದಿಗಳು ಹುಟ್ಟುತ್ತವೆ. ಅಲ್ಲೆಲ್ಲ ಗುಡ್ಡಗಳೇ ; ಪರ್ವತಗಳೇ. ಅವುಗಳ ಮೇಲೆಲ್ಲ ಕಾಡುಗಳೇ. ಅವುಗಳ ಮೇಲೆ ಮಳೆ ಮುಗಿಲುಕವಿದು, ಕವಿದು, ಮಳೆ ಬಡಿದು, ಬಡಿದು ನೀರು ನೆಲದೊಳಕ್ಕೆ ಇಂಗುತ್ತದೆ ; ಹೆಚ್ಚಿನ ನೀರು ಮೇಲಿಂದಲೇ ಹರಿಯುತ್ತದೆ. ಅಂಥ ಒಂದು ತಾವು ತೀರ್ಥಹಳ್ಳಿ ತಾಲ್ಲೂಕಿನ ಅಂಬುತೀರ್ಥ ಎಂಬ ಸ್ಥಳ. ಅಲ್ಲಿ ಒಂದು ಗುಡ್ಡದ ಮಗ್ಗುಲಲ್ಲಿ ನೆಲದೊಳಗಿನಿಂದ ಒಂದು ಬುಗ್ಗ ನೀರನ್ನು ಉಕ್ಕುತ್ತ ಕಿರಿಯ ತೋಡಿನಂತೆ ಹರಿಯುತ್ತದೆ. ಇದು ಉತ್ತರ ಕನ್ನಡ ಜಿಲ್ಲೆಯ ಶರಾವತಿ ಎಂಬ ನದಿ ಹುಟ್ಟುವ ಸ್ಥಳ–ಎಂದು ತಿಳಿಯುತ್ತಾರೆ. 'ಶರ' ಎಂದರೆ ಅಂಬು ; 'ಅಂಬು' ಎಂದರೆ ಬಾಣ. 'ಅಂಬು' ಎಂದರೆ ನೀರೂ ಅಹುದು. ಈ ತಾವಿನಿಂದ ನೀರು ಹರಿದು, ಸಣ್ಣ ಕೆರೆಯಾಗಿ, ಮುಂದಕ್ಕೆ ಹೋಗುತ್ತದೆ. ಹಾಗೆ ಹೋಗುತ್ತ ಹೋಗುತ್ತ ಆಚೀಚಿನ ಕಾಡುಗಳಿಂದ, ಗುಡ್ಡಗಳಿಂದ ಹರಿದು ಬರುವ ಇನ್ನಿತರ ಸಣ್ಣ ಹಳ್ಳಗಳಿಂದ ಪುಷ್ಟಿಗೊಳ್ಳುತ್ತದೆ. ಅದು ಹರಿಯುತ್ತ ಹೋದಂತೆ ಇನ್ನೂ ಹೆಚ್ಚಿಗೆ ಹಳ್ಳಗಳು ಅದನ್ನು ಸೇರುತ್ತವೆ. ಅದು ಹಾಗೆ ನೀರಿನಿಂದ ಪುಷ್ಟಿಗೊಂಡು ಒಂದು ಫರ್ಲಾಂಗಿಗಿಂತಲೂ ಹೆಚ್ಚು ಅಗಲದ ನದಿಯಾಗಿ ಜೋಗ ಎಂಬ ಊರಿಗೆ ಮುಂದುವರಿಯುತ್ತದೆ. ಈ ಸ್ಥಳ ಸಹ್ಯಾದ್ರಿ ಬೆಟ್ಟದಲ್ಲಿನ ತಗ್ಗಾದೊಂದು ಗುಂಡಿ. ಆ ನದಿ ಬರುತ್ತ, ತನ್ನ ದಾರಿಯ ಮಣ್ಣನ್ನೆಲ್ಲ ಕೊಚ್ಚಿ ಸಾಗಿಸಿ ಬಂಡೆಗಳನ್ನು ಉರುಳಿಸಿ, ಸವೆದು ಬಲು ಬಿರುಸಿನಿಂದ ಅಲ್ಲಿಯ ತನಕವೂ ಹರಿದು ಬಂದಿರುತ್ತದೆ. ಅಲ್ಲಿಗೆ

ಬಂದೊಡನೆಯೇ 'ಇನ್ನೇನಪ್ಪಾ ಮಾಡಬೇಕು ?' ಅನಿಸುತ್ತದೆ ಅದಕ್ಕೆ. ಬೆಟ್ಟದ ಗೋಡೆಯ ಅಂಚಿನ ತನಕ ಅದು ಬಂದಿದೆ. ಅದಕ್ಕಿಂತ ಮುಂದಿನ ಕಂದಕ ಎರಡು ಸಾಲು ಪರ್ವತಗಳ ನಡುವಣ ಇಕ್ಕಟ್ಟಿನ ಜಾಗ ; ಅದು ಸಾವಿರ ಅಡಿ ಆಳದಲ್ಲಿದೆ. ನೀರಿಗೆ ಬುದ್ಧಿಯುಂಟೇ ? ಮೇಲೆ ಏರುವುದಕ್ಕೆ ಅದಕ್ಕೆ ಗೊತ್ತಿಲ್ಲ. ಇಳಿಯುವುದೊಂದೇ ಅದಕ್ಕೆ ಗೊತ್ತು. ಇಲ್ಲಿ ಇಳಿಯುವುದಕ್ಕೂ ಜಾಗವಿಲ್ಲ. 'ಆದದ್ದಾಗಲಿ' ಎಂದು ನದಿ ಈ ತಾವಿನಲ್ಲಿ ೯೬೦ ಅಡಿ ಆಳಕ್ಕೆ ನಾಲ್ಕು ಸೀಳುಗಳಾಗಿ ಕುಪ್ಪಳಿಸಿಯೇ ಬಿಡುತ್ತದೆ. 'ಗೇರಸೊಪ್ಪೆ ತಡಸಲು' ಅಥವಾ 'ಜೋಗ ಫಾಲ್ಸ್' ಎಂಬುದಿದು. ನದಿ ಹಾರುವ ತಾವಿನ ಹೆಸರು ಜೋಗು. ಅದು ಮುಟ್ಟುವ ತಾವಿನ ಹೆಸರು ಗೇರಸೊಪ್ಪೆ. ಅದು ಧುಮುಕುವ ಗೋಡೆಯ ಭಾಗ ಶಿಲೆಯ ಭಾರೀ ದಪ್ಪದ ಪದರು. ಕಮಾನಿನಂತೆ ಬಾಗಿದ ಈ ಗೋಡೆಯ ನಾಲ್ಕು ಕಡೆಗಳಿಂದಲೂ ನದಿ ನೀರು ಬೀಳುವ ನೋಟವನ್ನು ನೋಡಲು ಎಲ್ಲೆಲ್ಲಿನ ಜನರು ಬರುತ್ತಾರೆ. ನದಿಯು ಒಂದು ಸೀಳು ಮೇಲಿಂದ ಕೆಳಕ್ಕೆ ಒಂದೇ ಜಿಗಿತದಲ್ಲಿ ಧುಮುಕುತ್ತದೆ. ಆ ನೀರಿನ ಪ್ರವಾಹ ಬೀಳ ಬೀಳುತ್ತ, ತುಂಡು ತುಂಡಾಗಿ ನೀರೋ, ನೊರೆಯೋ ಎಂಬ ಭೇದವಿಲ್ಲದ ಆಕಾರವನ್ನು ತಾಳಿ ಕೆಳಗಣ ಅಗಾಧ ಕಮರಿಯನ್ನು ಸೇರುವ ನೋಟ ಅಂತಿಂಥ ವೈಭವವಲ್ಲ. ಅದರ ಎರಡನೆಯ ಸೀಳು ಬಂಡೆಗಳ ಗೋಡೆಯನ್ನು ಕೊರೆದು ಒಂದು ಡೊಂಕಾದ ದಾರಿ ಮಾಡಿಕೊಂಡು, ಅರ್ಧ ಗೋಡೆಯಿಂದ ನೆಟ್ಟಗೆ ಕೆಳಕ್ಕೆ ಜಿಗಿಯುತ್ತದೆ. ಮತ್ತೆರಡು ಸೀಳುಗಳು ಬಂಡೆಯ ಗೋಡೆಯ ಯಾವತ್ತು ಮೈಯ ಮೇಲೆ ಹಾರಿ, ಕುಣಿದು, ಹರಿಹಂಚಾಗಿ, ಅಪ್ಸರೆಯರ ನರ್ತನದಂತೆ ಬಗೆ ಬಗೆಯ ಬೆಡಗಿನಿಂದ ಕೆಳಕ್ಕೆ ಇಳಿಯುತ್ತವೆ. ಹೀಗೆ ಒಂದೇ ತಾವಿನಲ್ಲಿ ಶರಾವತಿ ನದಿ ನಾಲ್ಕು ಬಗೆಗಳಿಂದ ಧುಮುಕಿ ಕೆಳಗಣ ಪ್ರಪಾತವನ್ನು ಸೇರಿ, ಅಲ್ಲಿಂದ ಗಟ್ಟಿಯಾದ ಬಂಡೆಗಳ ನೆಲವನ್ನು ಕೊರೆದು ಉರುಳುತ್ತ, ಓಡುತ್ತ, ಮೊರೆಯುತ್ತ, ಆರ್ಭಟಿಸುತ್ತ ಏಳೆಂಟು ಮೈಲುಗಳ ದೂರ ಬೆಟ್ಟದ ಕೊಳ್ಳಕಲೊಂದರಲ್ಲಿ ಧಾವಿಸುತ್ತದೆ. ಅಲ್ಲಿಂದ ಅದರ ಘಟ್ಟದ ಪಯಣ ಕಳೆಯಿತು. ಹಾಗೆ ಕಳೆಯುವ ತಾವಿನಲ್ಲಿ ಎಂದರೆ–ಹಿಂದೆ ಜೈನ ಅರಸರುಗಳ ಒಂದು ವಂಶ ರಾಜಧಾನಿಯನ್ನಾಗಿ ಮಾಡಿಕೊಂಡಿತ್ತು. ಅದರ ಹೆಸರು ಗೇರಸೊಪ್ಪೆ.

ಇಲ್ಲಿಂದ ಮುಂದಕ್ಕೆ ಕಡಲಿಗಿರುವ ದೂರ ಕೇವಲ ೧೮–೨೦ ಮೈಲು,



ಗೆರಸೊಪ್ಪೆ ಜಲಪಾತ

ನದಿಯು ದಾರಿಯು ಆಚೀಚೆಲ್ಲ ಸಾಮಾನ್ಯ ಎತ್ತರದ ನೂರಾರು ಗುಡ್ಡಗಳಿವೆ ; ವಿಶಾಲವಾದ ಬಯಲುಗಳಿವೆ. ಇಂಥ ನೆಲದ ನಡುವೆ ಶರಾವತಿ ನದಿ ಮೊದಲಿನ ಆರ್ಭಟ, ಅವಸರಗಳನ್ನೆಲ್ಲ ಕಳೆದುಕೊಂಡು, ಮೆಲುನಡೆಯಿಂದ ಹರಿಯುತೊಡಗುತ್ತದೆ. ದಾರಿಯು ನೆಲ ಚಪ್ಪಟೆಯಾದಂತೆ ಅದರ ಪ್ರವಾಹ ನೆಟ್ಟಗೆ ಹರಿಯುವ ಬದಲು ಆಚೀಚೆ ಹುಡುಕಿ ನೋಡಿ ತಗ್ಗಿನ ತಾವನ್ನು ಹಿಡಿದು ಹೋಗಬೇಕು. ಹೀಗಾಗಿ ಮೊದಲಿನ ಅಂಬಿನ ಓಟ ಅದಕ್ಕೆ ಉಳಿಯುವುದಿಲ್ಲ. ಅಂಕು ಡೊಂಕಾದ ಹೆಬ್ಬಾವಿನಂತೆ ಮೆಲ್ಲಗೆ ಹರಿಯತೊಡಗುತ್ತದೆ. ಅದರ ದಾರಿಯು ಆಚೀಚೆಲ್ಲ ತಾನು ಹೊತ್ತು ತಂದ ಮರಳನ್ನೆಸೆಯುತ್ತದೆ. ವೇಗ ಕಡಿಮೆಯಾದ ಆ ನದಿಯ ಮೇಲೆ ಜನ ದೋಣಿ ಸವಾರಿ ಮಾಡುತ್ತಾರೆ. ಅದರ ನೀರನ್ನು ಎತ್ತಿ, ಸಾಗಿಸಿ, ರೈತರು ತೆಂಗು, ಕಂಗು, ಕಬ್ಬು, ಬತ್ತದ ಬೆಳೆಗಳನ್ನು ಬೆಳೆಯುತ್ತಾರೆ. ನದಿ ದಂಡೆಯ ಗುಡ್ಡಗಳು, ಆಚೀಚಿನ ಹಸುರು ಹೊಲಗಳು ಎಂದೂ ನೋಡಿ ಮೆಚ್ಚಬಹುದಾದ ದೃಶ್ಯಗಳಾಗಿವೆ. ಈಗ ಈ ನದಿಗೆ ಅಗಲ ಹೆಚ್ಚು ; ನೀರೂ ಹೆಚ್ಚು. ಅದರ ಗತಿ ಮಾತ್ರ ಮೆಲ್ಲಗೆ. ಇನ್ನು ಅದರ ಪಯಣ ಮುಗಿಯುತ್ತ ಬಂದಿತು. ಹೊನ್ನಾವರ ಎಂಬಲ್ಲಿ–ಅದು ಸಮುದ್ರವನ್ನು ಕೂಡಿಕೊಂಡರಾಯಿತು ; ಸುಲಭದ ಕೆಲಸ.

ನಿಜಕ್ಕೂ ಆ ಕೆಲಸ ನದಿಯ ಪಾಲಿಗೆ ಸುಲಭವಲ್ಲ ; ಏಕೆ ಗೊತ್ತೇ ? ಸಮುದ್ರರಾಯ ಅದನ್ನು ಸುಲಭದಲ್ಲಿ ಬಿಡುವುದಿಲ್ಲ. ಸೂರ್ಯ ಚಂದ್ರರ ಆಕರ್ಷಣೆಯಿಂದ, ದಿನಕ್ಕೆ ಎರಡು ಬಾರಿ ಕಡಲಿನ ನೀರು ಉಬ್ಬುತ್ತದೆ ; ಅನಂತರ ಇಳಿಯುತ್ತದೆ–ಎಂದು ನೀವು ಕೇಳಿರಬೇಕು. ಹಾಗೆ ನೀರು ಉಬ್ಬಿದಾಗ 'ಭರತ' ಎನ್ನುತ್ತೇವೆ ; ತಗ್ಗಿದಾಗ 'ಇಳಿತ' ಎನ್ನುತ್ತೇವೆ.

ಕಡಲಿನ ಭರತದ ನೀರು ಉಬ್ಬಿ, ನದಿಯ ಪಾತ್ರದೊಳಕ್ಕೆ ನುಗ್ಗಿ ಆರೆಂಟು ಮೈಲು ದೂರದ ತನಕವೂ ನದಿಯನ್ನು ಹಿಮ್ಮೆಟ್ಟಿಸುವುದಕ್ಕೆ ಪ್ರಯತ್ನಿಸುತ್ತದೆ. ಆ ಭರತದ ನೀರಿನಿಂದ ನದಿಯೂ ಉಬ್ಬಿಕೊಳ್ಳುತ್ತದೆ. ಕಡಲು ಅದನ್ನು ಅಡ್ಡಗಟ್ಟುತ್ತದೆ. ಹೀಗೆ ತುಂಬಿದ ನೀರು ಇಕ್ಕಡೆಗೆ ಹರಿದು ವಿಸ್ತರಿಸಲು ಪ್ರಯತ್ನಿಸುತ್ತದೆ. ಅದರಿಂದ ನದಿಯ ಮುಖದಲ್ಲಿ ಆಚೀಚಿನ ಸಮತಟ್ಟಾದ ನೆಲದೊಳಕ್ಕೆ ನೀರು ನುಗ್ಗಿ ಖಾರಿಗಳುಂಟಾಗುತ್ತವೆ. ಕಾಣುವುದಕ್ಕೆ ಈ ಖಾರಿಗಳೂ ನದಿಗಳಂತಿರುತ್ತವೆ. ಆದರೆ ಅವಕ್ಕೆ ಸ್ವಂತ ನೀರಿಲ್ಲ. ಭರತ ಬಂದಾಗ ನೀರುಂಟು. ಆ ನೀರು ಇಳಿದ ಮೇಲೆ, ಖಾರಿಗಳ ನೆಲ ಕೆಸರಿನ ಗದ್ದೆಯಾಗುತ್ತದೆ. ನಮ್ಮ ನದಿ ಅಳಿವೆಗಳ ಮಗ್ಗುಲಲ್ಲಿ

ಇಂಥ ಖಾರಿಗಳಿದ್ದೇ ಇವೆ. ಅವುಗಳ ಅಂಚುಗಳಲ್ಲಿ 'ಕಾಂಡಲ' ಎಂಬ ಒಂದು ಜಾತಿಯ ಉಪ್ಪು ನೀರಿನ ಗಿಡಗಳು ಬೆಳೆದು ಸೈನಿಕರ ಪಟಾಲಮಿನಂತೆ ಕಾಣಿಸುವುದುಂಟು. ಖಾರಿಯ ದಂಡೆಗಳಲ್ಲಿ ತೆಂಗಿನ ತೋಟಗಳಿರುತ್ತವೆ. ನೀವು ಹೊನ್ನಾವರಕ್ಕೆ ಹೋಗಿ, ಅಲ್ಲಿನ ಒಂದು ಎತ್ತರದ ಗುಡ್ಡದ ಮೇಲೆ ನಿಂತು ನೋಡಿದಿರಾದರೆ ಸುತ್ತ ಕಾಣಿಸುವ ಚೆಲುವು ಅಂತಿಂಥದಲ್ಲ. ದೂರದ ಪಡುವಣದಲ್ಲಿ ನೀಲ ಕಡಲಿದೆ ; ಇಲ್ಲಿ ನದಿ ಕಡಲ ನೀರಿನ ಒತ್ತಡದಿಂದಾಗಿ ಆಚೀಚೆ ಹರಡಿಕೊಂಡು ಹತ್ತಿಪ್ಪತ್ತು ಚದರ ಮೈಲು ವಿಸ್ತಾರಕ್ಕೆ ಅಗಲಿಸಿ ವಿಶಾಲ ಸರೋವರದಂತೆ ಕಾಣಿಸುತ್ತದೆ. ಅದರೊಳಗೆ ಚಿಕ್ಕ ದೊಡ್ಡ ಕುದುರುಗಳಿವೆ. 'ಕುದುರು' ಎಂದರೆ ದ್ವೀಪ. ನದಿಯಲ್ಲಿರುವ ದ್ವೀಪ. ಆ ದ್ವೀಪಗಳ ನದಿಯ ದಂಡೆಗಳೂ ತೆಂಗು, ಕಂಗುಗಳ ಹಸಿರಿನ ಚಪ್ಪರವಾಗಿ ಕಾಣಿಸುತ್ತವೆ. ಅವುಗಳ ಬೆಂಗಡೆಯಲ್ಲಿ ಎಷ್ಟೆಷ್ಟೋ ಗುಡ್ಡಗಳಿವೆ. ಅವನ್ನು ನೋಡುವಾಗಲೆಲ್ಲ ಹಿಗ್ಗು, ಸಂತೋಷಗಳಿಂದ ಹುಚ್ಚೇ ಹಿಡಿಯಬೇಕು. ನೀರಿನ ಈ ವಿಶಾಲ ಹರಹಿನಲ್ಲಿ ಹಾಯಿ ಬಿಡಿಸಿದ ಮಚ್ವೆಗಳು ಆಗಾಗ ಬಂದು ಹೋಗುತ್ತಿರುತ್ತವೆ. ಜನ ಸಂಚರಿಸುವ ನೂರಾರು ಸಣ್ಣ ದೋಣಿಗಳೂ ಆಚೀಚೆ ಹೋಗಿ ಬರುತ್ತವೆ. ಕೆಲವು ದೋಣಿಗಳು ಹಾಯಿ ದೋಣಿಗಳಾಗಿರಲೂ ಬಹುದು. ಅವು ಸರಕನ್ನು ಹೊತ್ತು ಹಳ್ಳಿಗಳಿಗೆ ಸಾಗಿಸುತ್ತವೆ. ಈ ನೀರಿನಲ್ಲಿ ಅಂಬಿಗರು ಗಾಳ ಹಾಕಿ ಮೀನು ಹಿಡಿಯುವುದನ್ನು ಕಾಣಬಹುದು. ಬಲೆ ಬೀಸುವುದನ್ನು ಕಾಣಬಹುದು. ಊರಿನ ಹೆಂಗಸರು, ಮಕ್ಕಳು ಇಲ್ಲಿನ ಖಾರಿಗಳ ಕೆಸರು ನೆಲವನ್ನು ತುಳಿಯುತ್ತ, ಆ ಕೆಸರಿನಲ್ಲಿ ಹುದುಗಿಕೊಂಡ ಮಳಿಯನ್ನು (ಚಿಪ್ಪು ಜೀವಿಗಳನ್ನು) ಹೆಕ್ಕುತ್ತಿರುವುದನ್ನು ಕಾಣಬಹುದು. ಅವರು ಆಚೀಚೆ ಓಡುವ ಏಡಿ, ಚೇಳೇಡಿಗಳನ್ನು ಅಟ್ಟಿ ಹಿಡಿಯಲೂಬಹುದು. ಕಾಣುವ ಕಣ್ಣಿದ್ದರೆ–ಈ ತಾಣದ ಒಂದೊಂದು ಮೂಲೆಯೂ ಒಂದೊಂದು ಸೊಗಸಿನ ನೋಟವೆನ್ನಬಹುದು.

ಗೇರಸೊಪ್ಪೆ ಜಲಪಾತವನ್ನು ಕುರಿತು ಕೇಳಿದ ನಿಮಗೆ, ಅಂಥ ಚೆಲುವು ದಾಣಗಳು ಇನ್ನೆಷ್ಟಿವೆ ಎಂದು ತಿಳಿಯುವ ಮನಸ್ಸಾದೀತು. [illegible], ಹಳ್ಳಗಳೂ, ನದಿಗಳೂ ಘಟ್ಟದ ಮೇಲಿಂದ ಕೆಳಕ್ಕೆ ಧುಮುಕುವಾಗ ಜಲಪಾತಗಳುಂಟಾಗಲೇ ಬೇಕಲ್ಲ ? ಅಂತಹ ಹಲವಾರು ಜಲಪಾತಗಳನ್ನು ಪಶ್ಚಿಮ ಘಟ್ಟದ ಸೆರಗಿನಲ್ಲಿ ಕಾಣಬಹುದು. ಆದರೆ ಹೆಚ್ಚಿನವು ದಟ್ಟವಾದ ಕಾಡು ತುಂಬಿದ ಬೆಟ್ಟಗಳಲ್ಲಿರುವುದರಿಂದ, ಅಲ್ಲಿಗೆ ಹೋಗುವುದು

ಕಷ್ಟ. ಕಾಡನ್ನು ತುಳಿದು, ಬೆಟ್ಟಗಳನ್ನು ಹತ್ತಿ, ಇಳಿದುನೋಡಲು ಸಾಹಸ ಪಡುವವರಿಗೆ ಆ ಸುಂದರ ತಾವುಗಳು ಕಂಡೇ ಕಾಣಿಸುತ್ತವೆ. ಅಂಥವು ಒಂದಲ್ಲ ಹತ್ತಾರಿವೆ. ಅರಣ್ಯಪ್ರದೇಶವಲ್ಲದಲ್ಲೂ ಅವು ಇವೆ. ಉದಾಹರಣೆಗೆ-ಕಾವೇರಿ ನದಿ ಕೊಡಗಿನ ಗುಡ್ಡಗಾಡಿನಲ್ಲಿ ಹುಟ್ಟಿ ಮುಂದೆ ಬಹುದೂರ ಪಯಣಿಸಿದ ಬಳಿಕ, ಕೊಳ್ಳೇಗಾಲಕ್ಕೆ ಎಂಟು ಮೈಲು ದೂರದ ಒಂದು ಸ್ಥಳದಲ್ಲಿ ಎರಡು ಸೀಳಾಗಿ ೨೦೦-೩೦೦ ಅಡಿ ಆಳಕ್ಕೆ ಧುಮುಕುತ್ತದೆ. ಆ ತಾವಿನ ಹೆಸರು ಶಿವಸಮುದ್ರ. ಬಹು ಕಾಲದ ಹಿಂದೆ ಹಾಗೆ ಧುಮುಕಿದ ನೀರನ್ನು ಬಳಸಿ ವಿದ್ಯುತ್ತನ್ನು ಪಡೆಯುವ ಕೇಂದ್ರವೊಂದನ್ನು ಅಲ್ಲಿ ನಿರ್ಮಿಸಿದರು. ಕಾವೇರಿಯ ಈ ಜಲಪಾತ ಗುಡ್ಡಗಾಡಿನ ನಡುವಣ ಸ್ಥಳ, ಆ ಬೆಟ್ಟಗಳ ಮೇಲಿಂದ ನದಿ ಎರಡು ಸೀಳಾಗಿ ಧುಮುಕುವ ನೋಟ ಒಂದು ರಮಣೀಯ ದೃಶ್ಯ. ಹಿಂದಿನವರು, ಆ ನದಿಯ ಆ ಎರಡು ಸೀಳುಗಳು ಉಂಟುಮಾಡಿದ ಆ ಸ್ಥಳವನ್ನು 'ಭರಚುಕ್ಕಿ' 'ಗಗನಚುಕ್ಕಿ' ಎಂದು ಕರೆದಿದ್ದಾರೆ. ಇಂಥ ತಾವುಗಳನ್ನು ನಾವು ಬಾಯಿಂದ ಎಷ್ಟು ಬಣ್ಣಿಸಿದರೂ ಕಡಿಮೆಯೇ. ಪ್ರತ್ಯಕ್ಷ ಕಂಡವನಿಗೇ ಗೊತ್ತು-ಅವುಗಳ ಸೊಗಸು, ಮಾತು ಬಣ್ಣಿಸಲಾರದ ಸೊಗಸು ಅವುಗಳದ್ದು.

ಯಲ್ಲಾಪುರಕ್ಕೆ ಎಂಟು ಮೈಲು ದೂರದಲ್ಲಿ ಬೇಡಿತಿ ಹೊಳೆ ಮಾಗೋಡು ಎಂಬಲ್ಲಿ ಸಹ್ಯಾದ್ರಿಯಿಂದ ಸುಮಾರು ಮುನ್ನೂರು ಅಡಿ ಆಳಕ್ಕೆ ಧುಮುಕುತ್ತದೆ. ಕಡು ಬೇಸಿಗೆಯಲ್ಲಿ ಇದರ ನೀರು ಬರುತ್ತದೆ. ಉಳಿದೆಲ್ಲ ತಿಂಗಳುಗಳಲ್ಲಿ ನಾವು ಮಾಗೋಡು ಜಲಪಾತದ ಚೆಲುವನ್ನು ನೋಡಬಹುದು. ಅದನ್ನು ನೋಡಲು ತುಸು ಬೆಟ್ಟ ಇಳಿಯಬೇಕು. ಆದರೆ ಹೋಗುವ ದಾರಿಯೇನೋ ಇದೆ.

ಉತ್ತರ ಕನ್ನಡ ಜಿಲ್ಲೆಯ ಸ್ವಾದಿ ಎಂಬ ಪ್ರದೇಶದಲ್ಲಿ ಅಘನಾಶಿನಿ ಎಂಬ ಹೊಳೆ ಹರಿಯುತ್ತದೆ. ಇದು ಈಗಣ ಸಿದ್ಧಾಪುರದಿಂದ ಸುಮಾರು ಇಪ್ಪತ್ತು ಮೈಲು ದೂರದ ಉಂಚಳ್ಳಿ ಎಂಬ ಸ್ಥಳದಲ್ಲಿ ಬೆಟ್ಟದ ಗೋಡೆಯಿಂದ ಇಕ್ಕಟ್ಟಾದ ಕೊರಕಲೊಂದಕ್ಕೆ ಧುಮುಕುತ್ತದೆ. ಇಲ್ಲಿ ನೋಡುವ ದೃಶ್ಯವೂ ಇಕ್ಕಟ್ಟಿನದೇ ; ಅದು ಬಹು ದೂರಕ್ಕೆ ಕಾಣಿಸುವ ನೋಟವಲ್ಲ. ನಾವು ಈ ಜಲಪಾತದ ತೀರ ಸಮೀಪ ಹೋಗಿ ಅದನ್ನು ನೋಡಬೇಕು. ಇದನ್ನು 'ಲಿಸ್ಸಿಂಗಟನ್' ಎಂಬೊಬ್ಬ ಐರೋಪ್ಯ ಕಲೆಕ್ಟರ ಗುರುತಿಸಿದ್ದರ ಮೇಲೆ 'ಲಿಸ್ಸಿಂಗಟನ್ ಜಲಪಾತ' ಎಂದೂ ಕರೆಯುತ್ತಾರೆ. ಇದೇ ನದಿ



ಶಿವಸಮುದ್ರ

ಮತ್ತಷ್ಟು ದೂರಕ್ಕೆ ತನ್ನ ಕೊರಕಲು ದಾರಿಯಲ್ಲಿ ಸರಿದು, ಇನ್ನೊಮ್ಮೆ ಕೆಳಕ್ಕೆ ಧುಮುಕುತ್ತದೆ. ಈ ಜಲಪಾತವನ್ನು 'ಬುರುಡೆ ಜೋಗ್' ಎಂದು ಕರೆಯುತ್ತಾರೆ.

ಕರಾವಳಿಯ ಶೀರೂರು ಎಂಬ ಊರಿನ ಪೂರ್ವಕ್ಕೆ ಹತ್ತಿಪ್ಪತ್ತು ಮೈಲುಗಳ ದೂರದಲ್ಲಿ ಇನ್ನೆರಡು ಮೋಹಕ ಜಲಪಾತಗಳಿವೆ. ಕರಾವಳಿಯ ದೂರದಿಂದಲೇ ಕಾಣಿಸುವ ಒಂದು ಜಲಪಾತದ ಹೆಸರು ಗಂಗಾ[illegible]. ಇದು ಸಹ್ಯಾದ್ರಿಯ ಬೆನ್ನಿನಿಂದ ಎರಡೆರಡು ಬಾರಿ ಮುರಿದು ಕೆಳಕ್ಕೆ ಹರಿದು ಬರುವ ಒಂದು ಜಲಪಾತವಾಗಿದೆ. ಅಲ್ಲಿಂದ ದಕ್ಷಿಣಕ್ಕೆ ಮತ್ತೊಂದು ಕಿರಿಯ ಹೊಳೆ ೫೦೦-೬೦೦ ಅಡಿ ಆಳಕ್ಕೆ ಒಮ್ಮೆಗೇ ಧುಮುಕುತ್ತದೆ. ಆ ತಾವಿಗೆ ಹೋಗುವ ದಾರಿಯೇ ಇಲ್ಲ. ವಿಮಾನದಲ್ಲಿ ಸಂಚರಿಸುವಾಗ ನನಗೆ ಆ ಜಲಪಾತ ಒಮ್ಮೆ ಕಣ್ಣಿಗೆ ಬಿದ್ದಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಬಾಳೆಬರೆ ಘಟ್ಟಕ್ಕೆ ಸಮೀಪದಲ್ಲಿ-ವಾರಾಹಿ ಎಂಬ ನದಿ ಸುಮಾರು ಮುನ್ನೂರು ಅಡಿ ಆಳಕ್ಕೆ ಧುಮುಕುವ ಒಂದು ನೋಟ ಬಹಳ ಮೋಹಕವಾಗಿದೆ. ಹುಲಿಕಲ್ಲು ಘಟ್ಟದ ದಾರಿಯಲ್ಲಿಯೇ ಹೆದ್ದಾರಿಗೆ ತಗಲಿಕೊಂಡೇ ನೂರಿನ್ನೂರು ಅಡಿ ಎತ್ತರದ ಒಂದು ಅತಿ ಸುಂದರ ಜಲಪಾತವಿದೆ ; ಮಳೆಗಾಲದಲ್ಲಷ್ಟೇ ಅದರ ಅಸ್ತಿತ್ವ. ಆದರೆ ಈ ಕಿರಿಯ ಜಲಪಾತವನ್ನು ಒಮ್ಮೆ ನೋಡಿದರೆ, ಮತ್ತೆಂದೂ ಮರೆಯುದಷ್ಟು ನೆನಪು ಉಳಿದೀತು.

ಆಗುಂಬೆಗೆ ತೀರ ಸಮೀಪದಲ್ಲಿ, ಘಟ್ಟಕ್ಕೆ ಸೇರುವ ದಾರಿಯಲ್ಲಿ ಹೋಗುವವರಿಗೆ ಕಾಣಿಸುವಂತೆ 'ಒನಕೆ ಅಬ್ಬಿ' ಎಂಬೊಂದು ನೀರಿನ ಧಾರೆಯಿದೆ. ಅದು 'ಒನಕೆ'ಯಂತೆ ನೆಟ್ಟಗೆ ಸಪುರವಾಗಿ ಮುನ್ನೂರು ಅಡಿ ಆಳಕ್ಕೆ ಧುಮುಕುತ್ತದೆ. ಅದೇನೇ ಮುಂದಕ್ಕೆ ಸಾಗಿ ಇನ್ನೊಂದು ಕಿರಿಯ ಜಲಪಾತವಾಗಿ ಕಾಣಿಸುವಲ್ಲಿ, ಅದರ ಬೆಡಗು ಮತ್ತಷ್ಟು ಹೆಚ್ಚು. ಆಗುಂಬೆಯಿಂದ ನಾಲ್ಕು ಮೈಲು ದಕ್ಷಿಣಕ್ಕೆ, ಸೀತಾನದಿ ಸಹ್ಯಾದ್ರಿಯ ಗೋಡೆಯಿಂದ ಎರಡೆರಡು ಕಡೆಗಳಲ್ಲಿ ಜಿಗಿಯುತ್ತದೆ. ಮೊದಲನೆಯ ಜಿಗಿತದ ತಾವನ್ನು 'ಬರ್ಕಣ' ಎಂದು ಕರೆಯುತ್ತಾರೆ. ಅಲ್ಲಿಗೆ ಹೋಗುವ ದಾರಿಯೂ ಇದೆ. ವರ್ಷದ ಆರು ತಿಂಗಳಲ್ಲಿ ಕಾಣಿಸುವ ಈ ಜಲಪಾತ ಸಾಕಷ್ಟು ಚೆಲುವಿನದು ; ಅದು ಧುಮುಕುವಲ್ಲಿಂದ ಪಡುವಣದಲ್ಲಿ ಕಾಣಿಸುವ ಪರ್ವತಾವಳಿಗಳ ದೃಶ್ಯ ಅನನ್ಯ ಸೊಬಗಿನದು. ಅದೇ ಸೀತಾನದಿ ಘಟ್ಟದ ಕೊರಕಲಿನಲ್ಲಿ ಮುಂದುವರಿದು, ಕಣಿವೆಗೆ ಇಳಿಯುವ ಮುಂಚೆ ಇನ್ನೊಂದು ಇಕ್ಕಟ್ಟಿನ ತಾವಿನಲ್ಲಿ

ಇನ್ನೂರಡಿ ಆಳದ ಜಲಪಾತವಾಗಿ ಧುಮುಕುತ್ತದೆ. ಇಲ್ಲಿ ಸುತ್ತಣ ಗೋಡೆ 'ಸ್ಲೇಟ್'ನಂತಹ ಪದರುಗಲ್ಲಿನ ಗೋಡೆ. ನದಿ ಧುಮುಕಿ ಮುಂದಕ್ಕೆ ಅದೇ ತೆರನ ಪದರುಗಲ್ಲಿನ ಬಂಡೆಗಳನ್ನು ಕೊರೆದು ಉರುಳಿಸಿ ಸಾಗುವ ಅಂಕುಡೊಂಕಾದ ದಾರಿಯಲ್ಲಿ ನಾವು ಹೆಜ್ಜೆ ಹೆಜ್ಜೆಗೂ ಹಲವು ರಮಣೀಯ ದೃಶ್ಯಗಳನ್ನು ಕಾಣಬಹುದು. ಇದೇ ತೆರನಲ್ಲಿ ಘಟ್ಟದಿಂದ ಇಳಿದು ಬರುವ ಕೆಂಪಿನ ಹೊಳೆ, ಅನೇಕ ಸುಂದರ ದೃಶ್ಯಗಳನ್ನೊದಗಿಸುತ್ತದೆ. ಹುಡುಕಿ ನೋಡುವವನಿಗೆ ಕನ್ನಡ ನಾಡಿನ ಪಶ್ಚಿಮ ಘಟ್ಟದ ಗೋಡೆಯಲ್ಲಿ ನೂರಾರು ಕಿರಿಯ, ಹಿರಿಯ ಜಲಪಾತಗಳು ಕಾದಿವೆ.

ಈ ಹಿಂದೆ, ನಮ್ಮ ನದಿಗಳು ಸಹ್ಯಾದ್ರಿಯಿಂದ ಮೂಡಣಕ್ಕೆ ಹರಿದು ಬಂಗಾಲ ಅಖಾತವನ್ನು ಕೂಡುವ ವಿಚಾರ ಹೇಳಿದೆನಲ್ಲ. ಅಂಥ ನದಿಗಳಲ್ಲಿ ತೀರ ದಕ್ಷಿಣಕ್ಕಿರುವ ನದಿಯೇ ಕಾವೇರಿ. ನಾಡಿನ ಸಾಕಷ್ಟು ಉತ್ತರದಲ್ಲಿ ಹರಿಯುವ ಒಂದು ನದಿ ಘಟಪ್ರಭಾ ನದಿ. ಈ ನದಿ 'ಗೋಕಾಕ' ಎಂಬಲ್ಲಿ ಸುಮಾರು ಇನ್ನೂರಡಿ ಆಳದ ಒಂದು ಜಲಪಾತವಾಗಿ ಧುಮುಕಿ ಮುಂದು ವರಿಯುತ್ತದೆ. ಇದರ ಚೆಲುವು ಬೇರೆಯೇ ತೆರನದು. ಈ ಜಲಪಾತದ ಸುತ್ತಮುತ್ತಣ ಪ್ರದೇಶ ಎರೆ ಮಣ್ಣಿನ ಬಯಲು ಭೂಮಿಯಾಗಿದೆ. ಆ ಭೂಮಿಯ ತುಂಬ ಅಲ್ಲಲ್ಲಿ ಹೆಬ್ಬಂಡೆಗಳು ಕವಿದ ಗುಡ್ಡಗಳೂ ಇವೆ. ಈ ಜಲಪಾತವಿರುವ ಪ್ರದೇಶ ಕೆಂಚು ಬಣ್ಣದ ಮರಳುಗಲ್ಲಿನ ರಾಜ್ಯ. ಅಂಥ ಮರಳುಗಲ್ಲಿನ ಪಾತ್ರೆಯನ್ನು ಘಟಪ್ರಭಾ ನದಿ ಕೊರೆದು ದಾರಿ ಮಾಡಿ ಕೊಂಡು ಹೋಗಿದೆ. ಹಾಗೆ ಹೋಗುತ್ತ ದಾರಿಯಲ್ಲಿ ಸುಮಾರು ಇನ್ನೂರು ಅಡಿ ಆಳಕ್ಕೆ ಧುಮುಕುತ್ತದೆ. ಅಲ್ಲಿನ ಚಂದವೇ ಬೇರೆ. ದೊಪ್ಪನೆ ಧುಮುಕುವ ನದಿಯ ವಿಲಾಸ ಒಂದಾದರೆ, ಆಚೀಚೆ ಸಾಕ್ಷಿ ಕಂಬಗಳಂತೆ ನಿಂತ ಬಂಡೆ ಗೋಡೆಯ ಮೇಲೆ ಎಷ್ಟೊಂದು ಬಣ್ಣಗಳಿವೆ—ಎನ್ನುವಂತಿಲ್ಲ. ಅಲ್ಲಿನ ನೆಲ ಸಂಜೆ ಮುಂಜಾನೆಗಳ ಬಿಸಿಲಿಗೆ ಕೆಂಪು, ಕಿತ್ತಳೆ, ಕಂದು, ಗೋಪಿ, ಹಳದಿ ಮೊದಲಾದ ಹಲವಾರು ಬಣ್ಣಗಳನ್ನು ಹೊಮ್ಮುತ್ತದೆ. ಆಗ ನೆರಳು ಬೀಳುವಲ್ಲಿನ ನೆಲ ಕಿನ್ನೀಲ, ನೇರಿಳೆ, ಕೆಂಚುಗಂದು ಬಣ್ಣಗಳನ್ನು ಹೊಮ್ಮುತ್ತದೆ. ನದಿ ಉಂಟುಮಾಡಿದ ಕೊರಕಲಿನ ಗೋಡೆ ಅಲ್ಲಿನ ಬಿರುಕುಗಳು, ಪದರುಗಳು, ಸೆರೆಗಳು ಇನ್ನು ಕಂಡಾಗ ಇವೆಲ್ಲ ಯಾವುದೋ ಕಾಲದಲ್ಲಿ ಯುದ್ಧದಲ್ಲಿ ಮಡಿದ ರಕ್ಕಸರ ರುಂಡಮುಂಡಗಳ ರಾಶಿಯಂತೆ ಗೋಚರಿಸುತ್ತವೆ.

ಇಂಥ ಯಾವ ತಾವನ್ನೇ ಆಗಲಿ ನಾವು ನೋಡಿ ಸಂತೋಷಪಡುವು



ತಲಕಾವೇರಿ

ವಕ್ಕೆ. ನಮ್ಮ ಕಣ್ಣು ಬಣ್ಣಗಳನ್ನು, ರೇಖೆಗಳನ್ನು, ಆಕೃತಿಗಳನ್ನು ಕಂಡು ಆನಂದಿಸಲು ಕಲಿಯಬೇಕು. ಆಗ ಅದರ ಸವಿ ಎಷ್ಟೆಂಬುದು ಗೊತ್ತಾ ದೀತು.

ಬಯಲು ಭೂಮಿಯ ಚೆಲುವೇ ಬೇರೆ. ಗುಡ್ಡಗಾಡಿನ ಚೆಲುವೇ ಬೇರೆ ; ಗಿಡಮರಗಳಿಂದ ತುಂಬಿದ ಪರ್ವತಗಳ ಸೊಬಗೇ ಬೇರೆ. ಕನ್ನಡ ನಾಡಿನ ಹೆಚ್ಚಿನ ಭೂಮಿ ಬಯಲುಭೂಮಿ. ಕೆಲವೆಡೆ ಅದರ ಮಣ್ಣು ಕಪ್ಪು ಬಣ್ಣದ್ದು. ಹಲವೆಡೆ ಕಂದು ಬಣ್ಣದ್ದು. ಮಳೆ ಬೀಳದ ಅರೆಗಾಲ ದಲ್ಲಿ ಆ ನೆಲವೆಲ್ಲ ಬರಡಾಗಿ, ಜಡವಾಗಿ ನಮಗೆ ಕಾಣಿಸೀತು. ಅದರಲ್ಲಿ ಚೆಲುವು ಕಾಣಿಸುವುದಕ್ಕೆ ನಾವು ಮಳೆ ಬೀಳುವ ತನಕವೂ ಕಾಯಬೇಕು. ಮಳೆ ಕಡಿಮೆಯಿರುವ ಪ್ರದೇಶಗಳಲ್ಲಿ ಮರಗಿಡಗಳೂ ಕಡಿಮೆ ; ಅಲ್ಲಿ ಹರಿ ಯುವ ತೊರೆಗಳೆಲ್ಲ ಬತ್ತಿರುತ್ತವೆ. ಇಲ್ಲಿ ಜನ ಹೇಗೆ ಬದುಕುತ್ತಾರೆ-ಎಂಬ ಚಿಂತೆ ಹುಟ್ಟುತ್ತದೆ. ಅಂಥಲ್ಲಿ ಒಮ್ಮೆ ಮಳೆ ಧಾರಾಳ ಬಿದ್ದು ನೆಲ ತಣಿಯಿ ತಾದರೆ, ಹತ್ತು ನೂರು ಮೈಲುಗಳ ದೂರದ ತನಕವೂ ನಾಡಿನ ರೈತರು – ನೆಲ ಉಳುವುದನ್ನು, ಬಿತ್ತುವುದನ್ನು ಕಾಣುತ್ತೀರಿ. ಅವರು ತಮ್ಮ ಹೊಲ ಗಳಲ್ಲಿ ಜೋಳ, ಸಜ್ಜೆ, ನವಣೇ ಗೋಧಿಗಳನ್ನು ಬಿತ್ತಿದರೆಂದರೆ ಒಂದೆರಡು ವಾರಗಳೊಳಗೆ ಅಲ್ಲಿನ ಕರಿಯ ನೆಲದ ಮೇಲೆ ಎಲ್ಲೆಲ್ಲೂ ಹಸುರಿನ ಛಾಯೆ ಮೂಡುತ್ತದೆ. ಮುಂದೆ ಸಕಾಲಕ್ಕೆ ಮಳೆ ಬಂತೆಂದರೆ, ಆ ಪ್ರದೇಶದಲ್ಲೆಲ್ಲ ಹಸುರಿನ ಹಬ್ಬವೇ ಹಬ್ಬ ! ನೂರಾರು ಚದರ ಮೈಲು ವಿಸ್ತಾರದ ಬಯಲು ಭೂಮಿ ಜೋಳ, ಸಜ್ಜೆ, ನವಣೆಗಳಂಥ ಬೆಳೆಗಳಿಂದ ತುಂಬಿಕೊಳ್ಳುತ್ತದೆ. ಅಲ್ಲಿನ ಹಸುರು ಪೈರು ಬೀಸುವ ಗಾಳಿಗೆ ತಲೆದೂಗುತ್ತದೆ. ಗಾಳಿ ಈ ಹಸುರು ಬೆಳೆಗಳ ಮೇಲೆ ಓಲಾಡಿ ಹಸುರು ಬಣ್ಣದ ಅಲೆಗಳನ್ನು, ಇಲ್ಲಿಂದಲ್ಲಿಗೆ, ಅಲ್ಲಿಂದಿಲ್ಲಿಗೆ ಹೊರಳಿಸುತ್ತದೆ. ಪೈರು ಮಾಗಿ ಹಣ್ಣಾಗು ವಾಗ ಅದರ ಹಸುರು ಬಣ್ಣ ಮಾಯವಾಗಿ ಪೈರಿಗೆ ಹೊನ್ನಿನ ಹಳದಿ ಬಣ್ಣ ಬರುತ್ತದೆ. ಆಗ ಬಯಲೆಲ್ಲ ಚಿನ್ನದ ಚಾಪೆ ಹರಡಿದಂಥ ಸೊಬಗನ್ನು ಕೊಡುತ್ತದೆ.

ಕೆಲಕೆಲವು ಕಡೆ ಜನ ತಮ್ಮ ಹೊಲಗಳಲ್ಲಿ ಹುಚ್ಚೆಳ್ಳಿನ ಬೀಜ ಬಿತ್ತು ತ್ತಾರೆ. ಕೆಲವರು ಸೂರ್ಯಕಾಂತಿ ಬೀಜ ಬಿತ್ತುತ್ತಾರೆ. ಅವುಗಳಿಂದ ಎಣ್ಣೆಗಾಳಿನ ಫಸಲು ಸಿಗುತ್ತದೆ. ಈ ಎರಡೂ ಪೈರುಗಳು ಬಲಿತಾಗ ಕಣ್ಣಿಗೆ ಇನ್ನಿಲ್ಲದಂಥ ಹಬ್ಬ. ಹುಚ್ಚೆಳ್ಳಿನ ಹೊಲಗಳು ಹಳದಿ ಹೂವುಗಳ

ಕಂಬಳಿಗಳಾಗುತ್ತವೆ. ಆ ಗಿಡಗಳ ಎಲೆಗಳ ಹಸುರೇ ಕಾಣಲಾರದಷ್ಟು, ದಟ್ಟ ಹೊನ್ನಿನ ಬಣ್ಣದ ಹಳದಿ ಹೂವುಗಳ ಹೊದ್ದಿಕೆ ಬರುತ್ತದೆ. ಇನ್ನೊಂದು ಸೊಗಸಾದ ಪೈರು ಸೂರ್ಯಕಾಂತಿಯದು. ಈ ಗಿಡ ದೊಡ್ಡ ಎಲೆಗಳುಳ್ಳ ನೀಳ ದಂಟಿನ ಗಿಡ. ಇದು ಬೆಳೆದ ಹೊಲ, ನಿಂತ ಮನುಷ್ಯನನ್ನು ಅಡಗಿಸ ಬಹುದು. ಇದರ ಮೇಲೆ ಗಾಳಿ ಬೀಸಿದರೆ ಒಂದೊಂದು ಗಿಡವೂ, ತನ್ನ ತೋಳಿನಿಂದ ಹಸುರೆಲೆಗಳ ಬೀಸಣಿಗೆಯನ್ನು ಹಿಡಿದು ಬೀಸುವಂತೆ ಕಾಣಿಸುತ್ತದೆ. ಸುಮಾರು ಮೂರು ತಿಂಗಳಲ್ಲಿ, ಗಿಡ ಹೂಬಿಡುವ ಕಾಲ ಬಂದಿತೆಂದರೆ ಆ ಚಂದವೇ ಚಂದ. ಅದರ ಹೂವುಗಳು ಬಟ್ಟಲು ಗಾತ್ರದವು ; ಒಂದೊಂದು ಗಿಡದ ಮೇಲೆ ಹತ್ತೆಂಟು ಹೂವುಗಳು ನಗುವ ಹುಣ್ಣಿಮೆಯ ಚಂದ್ರನಂತೆ, ಒಂದೇ ದಿಕ್ಕಿಗೆ ಮುಖಮಾಡಿಕೊಂಡು ಕಾಣಿಸುತ್ತವೆ. ಎಕರೆ ಎಕರೆ ವಿಸ್ತಾರಕ್ಕೆ ನೂರು ಸಾವಿರ ಗಿಡಗಳು ಹಾಗೆ ನಿಂತುಕೊಂಡು, ಗಾಳಿಗೆ ತೂಗಾಡುವಾಗ, ಸ್ವರ್ಗದ ದೇವತೆಗಳೇ ಭೂಮಿಗೆ ಇಳಿದು ಬಂದು ಏನೋ ಹಬ್ಬವನ್ನು ನಡೆಯಿಸುತ್ತಿದ್ದಾರೆ ಎನ್ನಿಸಬೇಕು.

ಬಯಲು ಭೂಮಿಯ ಚಂದ ಒಂದಾದರೆ, ಅದೇ ಭೂಮಿಯ ಗುಡ್ಡ ಗಾಡುಗಳ ರೂಪ ಮತ್ತೊಂದು ತೆರನದು. ನಮ್ಮ ನಾಡಿನ ಬಳ್ಳಾರಿ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಲ್ಲಿ ಅನೇಕ ಕಡೆ ಗುಡ್ಡಗಳು, ಬೆಟ್ಟಗಳು ಕಾಣಿಸುತ್ತವೆ. ಅವನ್ನು ಆ ಹೆಸರಿನಿಂದ ಕರೆದರೆ ಸರಿಯೋ-ಎಂಬ ಅಳುಕೂ ಬರುತ್ತದೆ. ಏಕೆಂದರೆ, ಇತರ ಗುಡ್ಡಗಳಂತೆ ಅವು ಮಣ್ಣಿನ ರಾಶಿಗಳಾಗಿ ಕಾಣಿಸುವುದಿಲ್ಲ. ಮಳೆಗಾಲದಲ್ಲೂ ಅವುಗಳ ಮೇಲೆ ಹುಲ್ಲಿನ ಹೊದಿಕೆ ಕಡಿಮೆ. ಉದಾಹರಣೆಗೆ-ಪುರಾತನ ಹಂಪೆ ಊರಿಗೆ ಹೋಗಿ: ಅಲ್ಲಿನ ಬೆಟ್ಟಗಳನ್ನು ನೋಡಿ. ಯಾವುದೋ ಯುಗದಲ್ಲಿ ಇಲ್ಲಿ ನೆಲೆಸಿದ್ದ ದೈತ್ಯರು ಎಲ್ಲೆಲ್ಲಿನ ಹೆಬ್ಬಂಡೆಗಳನ್ನು ಹೊತ್ತು ತಂದು, ಇಲ್ಲೆಲ್ಲ ರಾಶಿಯೊಟ್ಟಿದ್ದಾರಲ್ಲ-ಅನಿಸುತ್ತದೆ. ಅವಾವುವೂ ಸಣ್ಣ ಪುಟ್ಟ ಬಂಡೆಗಳಲ್ಲ. ಆನೆಗಾತ್ರದ ಬಂಡೆಗಳು ; ತಿಮಿಂಗಿಲ ಗಾತ್ರದ ಬಂಡೆಗಳು ; ಹೆಚ್ಚೇನು ? ಗುಡ್ಡ ಗಾತ್ರದ ಬಂಡೆಗಳು ! ಎಲ್ಲೆಲ್ಲೂ ಬಂಡೆಗಳದ್ದೇ ಒಟ್ಟಿಲು. ಈ ಬಂಡೆಗಳೆಡೆಯಲ್ಲಿ ನೈಸರ್ಗಿಕ ಗುಹೆಗಳೂ ಇವೆ. ಬಂಡೆಗಳ ಮೇಲೆ ಜೇನುಹುಟ್ಟುಗಳು ಕಾಣ ಬಹುದು. ಇಲ್ಲಿನ ಗುಹೆಗಳಲ್ಲಿ ಕಪ್ಪು ಕರಡಿಗಳು ಕಾಣಸಿಗುವುದುಂಟು ; ಮುಳ್ಳುಹಂದಿ ಮನೆ ಮಾಡಿಕೊಂಡಿರುವುದುಂಟು. ಅಲ್ಲಿರುವ ಗುಡ್ಡಗಳೆಲ್ಲ ಇಂಥವೇ. ಇಲ್ಲಿನ ಗುಡ್ಡಗಳ ಬಂಡೆಗಳ ಎಡೆಯಿಂದ ಮುಳ್ಳಿನ ಗಿಡಗಳು



ಹಂಪೆಯ ಸುತ್ತಮುತ್ತಲಿನ ಹೆಬ್ಬಂಡೆಗಳ ರಾಶಿ

ಮೊಳೆತು, ಒಂದಿಷ್ಟು ಹಸುರನ್ನು ಒದಗಿಸುತ್ತವೆ. ಬಂದೇಟಕ್ಕೆ ಒಣಗಿ ಕಾಣಿಸುವ ಈಚಲ ಮರಗಳನ್ನೂ ಈ ಪ್ರದೇಶದಲ್ಲಿ ಕಾಣಬಹುದು.

ಇದಕ್ಕಿಂತ ಪ್ರತ್ಯೇಕವಾಗಿ ಕಾಣಿಸುವ ಇನ್ನೊಂದು ಬಗೆಯ ಗುಡ್ಡಗಳ ಸೊಬಗನ್ನು ನೀವು ಬಾದಾಮಿಯಲ್ಲಿ, ಬನಶಂಕರಿಯಲ್ಲಿ, ಗುಳೇದಗುಡ್ಡಗಳಲ್ಲಿ ಕಾಣಬಹುದು. ಇವು ಮರಳುಗಲ್ಲಿನ ಗುಡ್ಡಗಳು. ಗೋಕಾಕದ ವಿಚಾರ ಹೇಳಿದೆನಲ್ಲ ! ಇಲ್ಲಿನ ಬಂಡೆಗಳು ಅಲ್ಲಿ ಕಾಣಿಸುವ ಬಂಡೆಗಳ ಜಾತಿಯವು. ಈ ಗುಡ್ಡಗಳ ಗೋಡೆಗಳನ್ನು ಕಂಡರೆ ಮಣ್ಣಿನ ಪದರು ಪದರು ಪ್ರತ್ಯೇಕ ಕಾಣಿಸುತ್ತದೆ. ಒಂದೊಂದು ಪದರೂ ಬೇರೆ ಬೇರೆ ಬಣ್ಣದ್ದಿರಬಹುದು. ಮಳೆ ಬಿತ್ತು ಎಂದರೆ, ಇಲ್ಲಿನ ಬಂಡೆಗಳು ನೀರಿನಿಂದ ತೊಯ್ದಾಗ, ನೀವು ಅಂಥ ನೆಲದ ಮೇಲೆ ನಡೆದು ಹೋಗಬೇಕು. ಆಗ ಎಷ್ಟೊಂದು ವಿಧದ ಬಣ್ಣಗಳು ಕಾಣಿಸುತ್ತವೆಂದಿಲ್ಲ. ಅವುಗಳೆಡೆಯಲ್ಲಿ ಸರಗಳಂತೆ ಕಾಣಿಸುವ ರೇಖೆಗಳೂ ಕಾಣಿಸುತ್ತದೆ. ಇಂಥ ಗುಡ್ಡಗಳು ಹೇಗೆ ಉಂಟಾಗಿರಬಹುದು ?

ಅದರ ಕಥೆ ಹೇಳುತ್ತೇನೆ. ನಮ್ಮ ಭೂಮಿ ಸಾವಿರಾರು ಮಿಲಿಯ ವರ್ಷಗಳ ಹಿಂದೆ ಹೀಗಿರಲಿಲ್ಲ. ಅದರ ಒಳಗೆ ಅಪಾರ ಕಾವು, ಒತ್ತಡಗಳು ತುಂಬಿ, ಅದೊಂದು ಚೆಂಡಾಗಿತ್ತು ; ಅದರ ಹೊರಗಣ ತೊಗಟೆ ಗಟ್ಟಿಗೊಂಡಿತ್ತು. ಆ ತೊಗಟೆಯ ತಗ್ಗಿನ ಪ್ರದೇಶಗಳಲ್ಲಿ ಮಳೆ ನೀರು ಕಲೆತು, ಸಾಗರಗಳುಂಟಾಗಿದ್ದುವು ; ಆ ಕಾಲಕ್ಕೆ ಭೂಮಿಯ ಒಳಗಡೆ ತುಂಬಿದ ಶಾಖ ಒತ್ತಡಗಳಿಂದ ಶಿಲಾದ್ರವ ಕರಗಿ, ಹೊರಗೆ ಉಕ್ಕಿದ್ದುಂಟು. ಭೂಮಿಯ ತೊಗಟೆ, ಚಾಪೆಯ ಮಡಿಕೆಗಳಂತೆ ಅಲ್ಲಲ್ಲಿ ನೆರಿಗಟ್ಟಿದ್ದುಂಟು. ಈ ಮಡಿಕೆಗಳೇ ಪರ್ವತಗಳು. ಅಂಥ ಮಡಿಕೆಗಳು ಮುಂದೆಯೂ ಹೆಚ್ಚಿನ ಶಾಖ ಒತ್ತಡಗಳಿಗೆ ಗುರಿಯಾಗಿ, ಅಲ್ಲಲ್ಲಿ ಮುರಿದು ಬಿದ್ದದ್ದುಂಟು, ಬಿರುಕುಗೊಂಡದ್ದುಂಟು. ಬಂಡೆಗಳು ಒಡೆದು ಬಿಸಿಲು ಮಳೆಗಳಿಂದ ಪುಡಿ ಮಣ್ಣಾದದ್ದುಂಟು. ಮಳೆ ಬಂದು, ಆ ಮಣ್ಣನ್ನು ಕೊಚ್ಚಿ ಸಾಗಿಸಿ ಅಲ್ಲಿ ಬರಿಯ ಹೆಬ್ಬಂಡೆಗಳ ತುಣುಕುಗಳ ರಾಶಿ ಮಾತ್ರ ಉಳಿದದ್ದುಂಟು. ಹಂಪೆಯ ಸುತ್ತಮುತ್ತಣ ಗುಡ್ಡ ಬೆಟ್ಟಗಳು ಇಂಥವು. ಆದರೆ ಬಾದಾಮಿಯ ಬೆಟ್ಟಗಳು ಬೇರೆಯೇ ತೆರನವು.

ಭೂಮಿಯ ಮೇಲೆ ಆಗಾಗ ಮಳೆ ಬಿದ್ದು, ನದಿಗಳಾಗಿ, ಆ ನದಿಗಳ ನೀರು ಭೂಮಿಯ ಮೇಲಿನ ಮಣ್ಣು, ಮರಳುಗಳನ್ನು ಹೊತ್ತು ಕಡಲಿಗೆ ಸಾಗಿಸುತ್ತದಷ್ಟೆ. ಆ ಕಡಲಿನ ತಳದಲ್ಲಿ ನದಿಗಳು ಸಾಗಿಸಿ ತಂದ ಮರಳು,

ಮಣ್ಣು ಪದರು ಪದರಾಗಿ ಕಲೆಯುತ್ತದೆ. ಮತ್ತೊಂದು ಕಾಲದಲ್ಲಿ, ಭೂಮಿಯ ಆಂತರಿಕ ಶಾಖ ಒತ್ತಡ ಹೆಚ್ಚಿ, ಅವು ಸಮುದ್ರ ತಳವನ್ನೇ ಮೇಲಕ್ಕೆತ್ತಿ ಬಿಡುವುದುಂಟು. ಆಗ ಕಡಲ ತಳ, ನೀರಿಗಿಂತಲೂ ಮೇಲಕ್ಕೆ ಬಂದು, ನೆಲವೋ ಬೆಟ್ಟವೋ ಆದೀತು. ಆ ನೆಲ ಸಮುದ್ರದ ಕೆಳಗಿದ್ದಾಗ ಅದರ ಮೇಲಣ ಭಾರದಿಂದ, ಒಳ ಗಣ ಶಾಖದಿಂದ ಅಲ್ಲಿ ಕಲೆತ ಮರಳು ದಟ್ಟಣೆಸಿ ಮರಳುಗಲ್ಲಾಗುತ್ತದೆ. ಬಾದಾಮಿಯ ಗುಡ್ಡ ಬೆಟ್ಟಗಳು ಇಂಥ ಮರಳುಗಲ್ಲಿನ ಸ್ತರಗಳು. ಸಾಗರದಿಂದ ಮೇಲೆದ್ದು ಬಂದ, ಪುರಾತನ ಯುಗದ ನೆಲ ಅಲ್ಲಿನದು.

ನಾನು ಈ ತನಕ ನಿಮಗೆ ಕನ್ನಡ ನಾಡಿನ ನೆಲವನ್ನು ಕುರಿತು ಸಾಕಷ್ಟು ಹೇಳಿದ್ದಾಯಿತು. ಈ ನಾಡಿನಲ್ಲಿ ಹೆಚ್ಚಿನ ಪ್ರದೇಶ ಸಸ್ಯರಹಿತ ಪ್ರದೇಶ ವಾದರೂ, ಸಾಕಷ್ಟು ಪ್ರದೇಶ ಕಾಡಿನಿಂದ ತುಂಬಿಕೊಂಡದ್ದು. ಅಲ್ಲಿ ಗಿಡ ಮರಗಳ ದಟ್ಟಣೆ ವಿಶೇಷವಾಗಿದೆ. ಅವುಗಳ ಎಲೆಗಳ ಚಪ್ಪರದ ಕೆಳಗೆ ಸೂರ್ಯನ ಬಿಸಿಲೂ ಇಣಿಕಿ ನೋಡದ ತಾವುಗಳುಂಟು. ಅಂಥ ವನ ಪ್ರದೇಶವನ್ನು ನೀವು ಹೋಗಿ ನೋಡಿದಿರಾದರೆ–ಅಲ್ಲಿನ ಬೆಡಗಿಗೆ ಮನ ಸೋತು ಮುಗ್ಧರಾದೀರಿ. ಅಲ್ಲಿ ನಿಮಗೆ ಏನೇನು ಕಾಣಸಿಗಬಹುದು ಎಂದು ಊಹಿಸುವುದೂ ಕಷ್ಟ.

ಕಾಡು ಎಂದರೆ ಭಯ ಮೂಡುತ್ತದೆ. ಹುಲಿ, ಕರಡಿ, ಆನೆಗಳ ಅಂಜಿಕೆ ಆಗುತ್ತದೆ ; ಕಾಳಿಂಗ, ಹೆಬ್ಬಾವುಗಳಂಥ ಹಾವುಗಳ ಭೀತಿ ಹುಟ್ಟು ತ್ತದೆ. ಅವು ಅಲ್ಲಿರುವುದೂ ನಿಜ. ಹೋದ ನಾವು ಅವನ್ನು ಪೀಡಿಸ ದಿದ್ದರೆ ಅವು ನಮ್ಮ ತಂಟೆಗೆ ಬರುವುದಿಲ್ಲ ಎಂಬುದೂ ಅಷ್ಟೇ ನಿಜ. ಹೆಚ್ಚಿನ ಅರಣ್ಯಗಳಲ್ಲಿ ನೋಡಲು ಹೋಗುವ ಜನರ ಸಲುವಾಗಿ ಯಾವ ಸೌಕರ್ಯವನ್ನೂ ಕಲ್ಪಿಸಿಲ್ಲ. ಅಲ್ಲದೆ ಜನರು ಕೋವಿ ಹಿಡಿದುಕೊಂಡು, ಕಾಡಿನಲ್ಲಿ ಬೇಟೆಯಾಡಿ ಪ್ರಾಣಿಗಳನ್ನು ಕೊಂದು, ಹಾವಳಿ ಎಬ್ಬಿಸುವ ಭೀತಿಯೂ ಇದೆ. ಹಾಗೆ ಮಾಡಲು ಜನಗಳನ್ನು ಬಿಟ್ಟರೂ ತಪ್ಪೇ. ಭೂಮಿಯ ಮೇಲೆ ಬದುಕಿ ಸುಖ ಪಡುವುದಕ್ಕೆ ಮನುಷ್ಯರಿಗೆ ಮಾತ್ರ ಹಕ್ಕೇನು ? ಹುಲಿ, ಕರಡಿಗಳು, ಕಾಟಿ, ಕಡವೆಗಳು, ಜಿಂಕೆಗಳು, ಎರಳೆಗಳು, ಹಾವುಗಳು, ಹಕ್ಕಿಗಳು ಭೂಮಿಯ ಮಕ್ಕಳಲ್ಲವೇನು ? ಅಂಥ ದೃಷ್ಟಿಯನ್ನು ಬೆಳೆಸಿಕೊಂಡವರಿಗೆ–ಕಾಡನ್ನು ಕಂಡರೆ ಅಲ್ಲೇ ಮನೆಮಾಡಿಕೊಂಡಿರುವ ಎನಿಸೀತು.

ಮಕ್ಕಳಿಗಾದರೂ ಸರಿಯೇ, ದೊಡ್ಡವರಿಗಾದರೂ ಸರಿಯೇ-ಚಿಕ್ಕ ಸುತ್ತಣ ಪಶು ಪಕ್ಷಿಗಳನ್ನು ಕಾಣುವುದೆಂದರೆ ಸಂತೋಷ. ಕೆಲವು ಪ್ರಾಣಿಗಳನ್ನು ಕಂಡರೆ ಭಯವೂ ಆಗಬಹುದು. ಆದರೆ ಅಂಥವನ್ನು ಕದ್ದಾದರೂ ನೋಡುವ ಎಂಬ ಆಸೆಯಾದೀತು. ಹಾಗೆ ಪ್ರಾಣಿಗಳನ್ನು ಕಾಣಬೇಕಾದರೆ-ನಾವು ಅವುಗಳಿರುವಲ್ಲಿಗೇ ಹೋಗಬೇಕು : ನಮ್ಮನ್ನು ಕಂಡು ಅವು ಓಡಿ ಹೋದರೆ ಆಗ ನಿರಾಶೆಯೂ ಆದೀತು. ಊರಲ್ಲಿರುವ ಪ್ರಾಣಿಗಳನ್ನು ನಾವು ಸದಾ ಕಂಡೇ ಕಾಣುತ್ತೇವೆ. ನಿತ್ಯ ನಿತ್ಯ ಕಾಣುವ ನಾಯಿ ಬೆಕ್ಕುಗಳ ವಿಚಾರದಲ್ಲಿ ನಮ್ಮ ಉತ್ಸಾಹ ಹುಟ್ಟುವುದಿಲ್ಲ. ಅಪೂರ್ವದ ಪಶುಪಕ್ಷಿಗಳನ್ನು ಕಾಣಬೇಕಾದರೆ ಅವನ್ನು ನಾವೆ ಅರಸಿ ಹೋಗಬೇಕು. ಜಿಂಕೆಗಳನ್ನೋ, ಕಾಟಿಗಳನ್ನೋ, ಕಾಣಬೇಕಾದರೆ ಅವು ಇರುವಲ್ಲಿಗೇ ಹೋಗಬೇಕು. ಅಪೂರ್ವಕ್ಕೆ ಒಮ್ಮೊಮ್ಮೆ ಅವು ಊರಿಗಾದರೂ ಕಾಣಸಬಹುದು. ಆದರೂ ನಮ್ಮ ಹಲವಾರು ಕಾಡುಗಳಲ್ಲಿ ಅವು ವಾಸಮಾಡುವ ನಿಶ್ಚಿತ ತಾವುಗಳಿವೆ ; ಮೇಯುವ ಸ್ಥಳಗಳಿವೆ ; ನೀರು ಕುಡಿಯಲು ಹೊಂಡಗಳಿವೆ. ಅಲ್ಲಿಗೆ ಹೋದರೆ ಅವನ್ನು ಕಾಣಬಹುದು. ಇತ್ತೀಚೆಗೆ ಸರಕಾರದವರು ಕೆಲವೊಂದು ಅರಣ್ಯಭಾಗಗಳನ್ನು ವನ್ಯ ಮೃಗಗಳ ರಕ್ಷಣೆಗಾಗಿಯೇ ಕಾದಿರಿಸಿದ್ದೂ ಇದೆ. ಅಂಥ ಸ್ಥಳಗಳಲ್ಲಿ ಸಂಚರಿಸಿ ನೋಡಲು ಏರ್ಪಾಟುಗಳೂ ಇವೆ. ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿ ಪ್ರದೇಶ, ಚಿಕ್ಕಮಗಳೂರು ಬಳಿಯ ಮುತ್ತೋಡಿ, ಕೊಡಗಿನ ನಾಗರಹೊಳೆ, ಮೈಸೂರಿನ ಬಂಡೀಪುರ-ಇಂಥವು ಅಂತಹ ಸ್ಥಳಗಳು. ನಿಮಗೆ ಕಾಡು ಪ್ರಾಣಿಗಳನ್ನು ಹೋಗಿ ನೋಡುವ ಆಸೆಯಿದ್ದರೆ ಅಂಥಲ್ಲಿಗೆ ಹೋಗಬಹುದು. ಅಲ್ಲಿ ಹೋಗಿ ಇರುವವರಿಗೆ ಬಂಗಲೆಗಳಿವೆ ; ಪ್ರಾಣಿಗಳನ್ನು ತೋರಿಸುವುದಕ್ಕೆ ಪ್ರತ್ಯೇಕ ಸಿಬ್ಬಂದಿ ಇದೆ. ಒಂದೆರಡು ದಿನ ಅದಕ್ಕಾಗಿ ಮೀಸಲಿಟ್ಟರೆ ತುಂಬ ಪ್ರಾಣಿಗಳನ್ನು ನೋಡುವ ಸಾಧ್ಯತೆ ಇದೆ. ಅಂಥ ಒಂದೆರಡು ಸ್ಥಳಗಳಲ್ಲಿ ಏನೆಲ್ಲ ಕಾಣಸಿಗಬಹುದು ಎಂದು ಹೇಳುತ್ತೇನೆ. ಬಂಡೀಪುರ ಎಂಬುದು ದೊಡ್ಡ ಅರಣ್ಯದ ಭಾಗ. ಅಲ್ಲಿ ಹೋಗಿ ನಾವು ಒಂದೆರಡು ದಿನ ಉಳಿದುಕೊಂಡದ್ದಾದರೆ-ನಮ್ಮನ್ನು ಆನೆಗಳ ಮೇಲೆ ಕುಳ್ಳಿರಿಸಿಕೊಂಡು ಅಥವಾ ಮೋಟರುಗಳಲ್ಲಿ ಕುಳ್ಳಿರಿಸಿಕೊಂಡು ಕಾಡಿನ ದಾರಿಗಳಲ್ಲಿ ಸುತ್ತಾಡಿಸುತ್ತಾರೆ. ಬಹಳ ಸಮಯದಿಂದಲೂ ಅಲ್ಲಿ ಬೇಟೆಯಾಡುವುದನ್ನು ನಿಷೇಧಿಸಿದ್ದರಿಂದ ಅಲ್ಲಿ ಪ್ರಾಣಿಗಳು ನಿರ್ಭೀತಿಯಿಂದ ಅಲೆದಾಡು

ತ್ತವೆ. ರಾತ್ರಿ ಹೊತ್ತು ಬಂಡೀಪುರ ಬಂಗಲೆಯಲ್ಲಿ ಉಳಿದುಕೊಂಡರೆ, ಆ ಬಂಗ್ಲೆಯ ಸುತ್ತಣ ಮೈದಾನಿನಲ್ಲಿ– ನೂರಾರು ಚಿತ್ರಾಂಗ ಜಿಂಕೆಗಳು ದನಕರು ಗಳಂತೆ ಬಂದು, ವಿರಮಿಸುತ್ತವೆ ; ಮೇಯುತ್ತವೆ. ಕಾಡಿನ ಮೂಲಕ ಹಗಲಲ್ಲಿ ಸಂಚರಿಸುವಾಗಲೂ ಹಲವಾರು ಜಿಂಕೆಗಳನ್ನು ಕಾಣಬಹುದು. ಹೆಣ್ಣು ಜಿಂಕೆಗೆ ಕೊಂಬು ಇರುವುದಿಲ್ಲ. ಗಂಡಿನ ತಲೆಯ ಮೇಲೆ ಕವಲು ಕೊಂಬಿರುತ್ತದೆ. ಜಿಂಕೆ ಬಲು ಮೋಹಕ ಆಕೃತಿಯ ಪ್ರಾಣಿ. ಅವರ ಕೆಂಚು ಮೈಯ ಮೇಲೆ ಬಿಳಿ ಬೊಟ್ಟುಗಳ ಸಾಲಿರುತ್ತದೆ. ಗಾಬರಿಗೊಂಡಾಗ ಒಂದೊಂದು ಜಿಂಕೆ ಜಿಗಿದು ಓಡತೊಡಗಿತೆಂದರೆ ಅದರ ಓಟದ ಚಂದವೇ ಚಂದ. ವೇಗವೇ ವೇಗ ! ಅದು ಒಂದೇ ಜಿಗಿತಕ್ಕೆ ೨೦–೩೦ ಅಡಿ ದೂರ ಕುಪ್ಪಳಿಸಬಹುದು. ಅದರ ಕಣ್ಣುಗಳೋ ದೊಡ್ಡ ಬೊಗಸೆ ಕಣ್ಣುಗಳು. ದಾರಿಯಲ್ಲಿ ಸರಿಯುವ ನಮ್ಮನ್ನು ಕಂಡು ಅದು ಕಿವಿ ನಿಮಿರಿಸಿ ಹೊಂಚಿ ನೋಡುವ ಚಂದವೇ ಚಂದ. ಅದರ ನಡಿಗೆ, ಓಟ ಎರಡೂ ಬಲು ಲಲಿತ.

ದಾರಿಯಲ್ಲಿ ಸರಿಯುತ್ತ ನೀವು ನಾಲ್ಕಾರು ಕಡವೆಗಳನ್ನು ಕಾಣಬಹುದು. ಅವು ಜಿಂಕೆಗಿಂತ ದೊಡ್ಡವು ; ಆದರೆ ಅದೇ ಜಾತಿಯ ಪ್ರಾಣಿಗಳು. ಅವು ಗಳ ಮೈಗೂದಲು ಬೂದು ಇಲ್ಲವೆ ಕೆಂಚು ಬಣ್ಣದವು. ಅವನ್ನು 'ಸಾಂಬರ' ಎಂದು ಕರೆಯುವ ವಾಡಿಕೆಯಿದೆ. ಜಿಂಕೆಯ ಬಳಗದ ಇನ್ನೊಂದು ಪ್ರಾಣಿ ಎಂದರೆ ಕೆಮ್ಮ. ಕೆಂಚುಮೈಯ ಈ ಪ್ರಾಣಿ ಕಾಣುವುದಕ್ಕೆ ಜಿಂಕೆಯಂತಿದೆ. ಅದರ ಗಾತ್ರ ಕುರಿಯದು. ಅದರ ಮೈಮೇಲೆ ಬೊಟ್ಟುಗಳಿಲ್ಲ. ತಲೆಯ ಮೇಲೆ ಒಂದೊಂದು ಕವಲಿನ ಚೋಟುದ್ದದ ಎರಡು ಕೊಂಬುಗಳಿರುತ್ತವೆ. ನಮ್ಮ ಜನ ಅವನ್ನು ಕಾಡು ಕುರಿ ಎಂದು ಕರೆಯುತ್ತಾರೆ. ಅದು ಕುರಿ ಜಾತಿಯ ಪ್ರಾಣಿಯೇ ಅಲ್ಲ.

ನಾವು ಕಳಿತ ಆನೆಯನ್ನೋ, ಮೋಟರನ್ನೋ, ನಡೆಯಿಸಿಕೊಂಡು ಕಾಡಿನಲ್ಲಿ ಹೋಗುವಾಗ–ನಮ್ಮ ಜತೆಗೆ ಬರುವ ವನಪಾಲಕರು ಆಚೀಚೆ ಕಣ್ಣು ಹೊರಳಿಸುತ್ತಿರುತ್ತಾರೆ. ಅವರಿಗೆ ಗೊತ್ತು–ಯಾವ ಹೊತ್ತಿಗೆ ಯಾವ ಆನೆಯ ಹಿಂಡು, ಎಲ್ಲಿ ಇದ್ದೀತು ಎಂದು. ಅಂಥವು ಆಡುವಲ್ಲಿಗೆ, ವಿರ ಮಿಸುವಲ್ಲಿಗೆ ಸಮೀಪಕ್ಕೇನೇ ನಮ್ಮನ್ನು ಕರೆದೊಯ್ಯುತ್ತಾರೆ. ಕಾಡಿನ ಮರಿಯಾನೆಗಳೂ, ಕಿರಿ ಆನೆಗಳೂ, ದೊಡ್ಡ ದೊಡ್ಡ ದೆವ್ವ ಆನೆಗಳೂ ಕಾಣ ಸಿಕ್ಕಿದರೆ ಕಣ್ಣಿಗೆ ಹಬ್ಬವೇ ಹಬ್ಬ. ನಮ್ಮ ಮೋಟರನ್ನು ಕಂಡು ಅವು ಒಂದಿಷ್ಟೂ ಹೆದರುವುದಿಲ್ಲ. ನೀರಿನಲ್ಲಿ ಚೆಲ್ಲಾಟವಾಡುತ್ತಲೇ ಇರು

ತ್ತವೆ. ನಾವು ಆನೆಯ ಮೇಲೆ ಕುಳಿತು ಹೋದರೆ, ಅದರ ಮಾವುತ ನಮ್ಮ ಆನೆಯನ್ನು ಚುಚ್ಚಿ ಕೂಗಿಸುವುದುಂಟು. ಆಗ ಸಾಕಷ್ಟು ದೂರದಲ್ಲಿ ಮರೆಯಲ್ಲಿದ್ದ ಕಾಡಾನೆಯೊಂದು ಆ ಧ್ವನಿಯನ್ನು ಕೇಳಿತಾದರೆ, ಅದೂ ಕೂಗುತ್ತದೆ. ಹಾಗೆ ಕೂಗಿದ ಕೂಗು ಕಾಡಾನೆಯ ಕುತೂಹಲ ಕೆರಳಿ, ನಾವಿರುವ ತಾಣವನ್ನು ಅದು ಸಮೀಪಿಸೀತು ; ಅಲ್ಲಿ ನಿಂತು ಪಟಪಟನೆ ಕಿವಿಯನ್ನು ಬಡಿದರೂ ಬಡಿಯಿತೇ. ನಮ್ಮ ಮಾವುತ ಅದನ್ನು ಗದರಿಸಿದರೆ–ಅದು ಅಲ್ಲಿಂದಲೇ ಪಲಾಯನ ಹೂಡೀತು.

ಕೊಡಗಿನ ನಾಗರಹೊಳೆಯಲ್ಲಿಯೂ ಇಂಥ ಆಕರ್ಷಕ ನೋಟ ಕಾಣಸಿಗುತ್ತದೆ. ಅಲ್ಲಿಯೂ ಜಿಂಕೆಗಳ ಹಿಂಡು ವಿಶೇಷ. ಕಾಟಿಗಳ ಮಂದೆಯನ್ನೂ ಅಲ್ಲಿ ಕಾಣಬಹುದು. ನಾವು ಕುಳಿತ ಆನೆ ಆ ಹಿಂಡುಗಳ ನಡುವಿನಿಂದ ಹಾದು ಹೋದರೂ ಅವು ಲಕ್ಷ್ಯಮಾಡುವುದಿಲ್ಲ. ಕಾಟಿ ಎತ್ತಿನ ಜಾತಿಯ ಒಂದು ಪ್ರಾಣಿ. ಕೆಲವರು ತಪ್ಪಾಗಿ ಕಾಟಿಯನ್ನೇ ಕಾಡುಕೋಣವೆಂದು ಕರೆಯುತ್ತಾರೆ. ಕಾಟಿ ಎಮ್ಮೆಯಷ್ಟು ದೊಡ್ಡ ಬಲಿಷ್ಠ ಜೀವಿ. ಅದರ ಭುಜ ಹಿಂಭಾಗಕ್ಕಿಂತ ಎತ್ತರ. ಅದರ ಬಾಗಿದ ಕೊಂಬುಗಳು ಅದರ ಮುಖ್ಯ ಆಯುಧ. ಆದರೆ ಅವು ತೀರ ಸಾಧು ಪ್ರಾಣಿಗಳು. ತಮ್ಮಷ್ಟಕ್ಕೇ ಹುಲ್ಲು ಮೇದು ಜೀವಿಸುವಂಥವು. ನಾವು ಬೇಕೆಂದೇ ಅವನ್ನು ಕೆಣಕಿದರೆ ಮಾತ್ರ ನಮ್ಮೆಡೆಗೆ ಧಾವಿಸಿ ಒಂದು ಕ್ಷಣದಲ್ಲಿ ನಮ್ಮನ್ನು ಕೊಂಬುಗಳಿಂದ ತಿವಿಯಬಹುದು.

ಈ ಕಾಡಿನಲ್ಲಿ ಸಂಚರಿಸುತ್ತ ನಾನು ಒಂದು ಕರಡಿಯನ್ನು ಕಂಡಿದ್ದೇನೆ. ಒಂದು ಬಾರಿ ಕೆನ್ನಾಯಿಗಳನ್ನು ಕಂಡಿದ್ದೇನೆ. ಕಾಡಿನಲ್ಲಿ ವಾಸಿಸುವ ಕೆನ್ನಾಯಿ ತೋಳ ಮತ್ತು ನಾಯಿಗಳ ನಡುವಣದ ಒಂದು ಜಾತಿ. ಅವು ಹಿಂಡಾಗಿ ಅಲೆಯುತ್ತ ಬೇಟೆಯಾಡುತ್ತವೆ. ಅವುಗಳ ಮೈಬಣ್ಣ ಕೆಂಚಾಗಿರುವುದರಿಂದ ಕೆನ್ನಾಯಿ ಎಂದು ಅವಕ್ಕೆ ಹೆಸರು. ಸೀಳುನಾಯಿ ಎಂಬ ಇನ್ನೊಂದು ಹೆಸರಿನಿಂದಲೂ ಅವನ್ನು ಕರೆಯುತ್ತಾರೆ. ಇಂದು ಕಾಡಿನಲ್ಲಿ ಅವುಗಳ ಸಂಖ್ಯೆ ತೀರ ಕಡಿಮೆಯಾಗುತ್ತ ಬಂದಿದೆ.

ಕಾಡಿಗೆ ಹೋದ ನಮಗೆ-ಆನೆ ಕಾಣಸಿಗಬಹುದು, ಕರಡಿ ಕಾಣಸಿಗಬಹುದು, ಮಂಗಮುಸುವಗಳ ಹಿಂಡೂ ಕಾಣಸಿಗಬಹುದು ; ಐವತ್ತು ವರ್ಷಗಳ ಹಿಂದೆ ನಮ್ಮ ಎಲ್ಲ ಕಾಡುಗಳಲ್ಲೂ ಹುಲಿ, ಚಿರತೆಗಳು ಧಾರಾಳವಾಗಿದ್ದುವು. ಅವು ಸಮೀಪದ ರೈತರ ದನಕರುಗಳನ್ನು ಮುರಿದು ತಿನ್ನು

ತ್ತಿದ್ದುದ್ದೂ ಉಂಟು. ಅವು ಒಮ್ಮೆ ಕೊಂದ ಪ್ರಾಣಿಯನ್ನು ಅರ್ಧ ತಿಂದು ಅಲ್ಲಿಯೇ ಬಿಟ್ಟುಹೋಗಿ ಮರುದಿನ ಹೊಟ್ಟೆ ಹಸಿವು ಹಿಂಗಿಸಿಕೊಳ್ಳಲು ಬರುತ್ತವೆ. ನಮ್ಮ ರೈತರ ಕೈಗೆ ಕ್ರಿಮಿನಾಶಕ ಫಾಲಿಡಾಲ್ ಸಿಕ್ಕಿದ್ದೇ ಹುಲಿ, ಚಿರತೆಗಳು ಅರ್ಧ ತಿಂದು ಬಿಟ್ಟ ಇಂಥ ಶವಗಳಿಗೆ ವಿಷ ಬೆರೆಸಿದರು. ಆಗ ಅವನ್ನು ತಿನ್ನಲು ಬಂದ ಹುಲಿ, ಚಿರತೆಗಳೂ, ಅವುಗಳ ಮರಿಗಳೂ ಆ ವಿಷದಿಂದ ಸತ್ತುಹೋದವು. ಮನುಷ್ಯನ ಇಂಥ ನಿರ್ದಯೆಯಿಂದ ಇಂದು ಅವುಗಳ ಕುಲವೇ ನಾಶವಾಗಿದೆ. ಎಲ್ಲೋ ವರ್ಷಕ್ಕೆ ಒಂದೆರಡು ಕಡೆ ಒಂದೆರಡು ಹುಲಿ ಚಿರತೆಗಳು ಕಾಣಸಿಕ್ಕಿದರೆ ದೊಡ್ಡದು. ಅಂಥ ವನ್ಯ ಮೃಗಗಳನ್ನು ಉಳಿಸಬೇಕೆಂದು ಅನೇಕ ಪ್ರಾಣಿ ಪ್ರಿಯರು ಶ್ರಮಿಸುತ್ತಿದ್ದಾರೆ. ಆ ಕಾರಣಕ್ಕಾಗಿ 'ಗೇಮ್ ಸೆಂಕ್ಚುಅರಿ' ಎಂದರೆ ವನ್ಯ ಮೃಗಗಳಿಗೆ ರಕ್ಷಣೆ ಒದಗಿಸುವ ಕಾರ್ಯಕ್ರಮ ಕೈಗೊಂಡಿದ್ದಾರೆ. ಇಂದು ನಮ್ಮ ಇಡೀ ಭಾರತ ದೇಶದಲ್ಲಿ ನಾಲ್ಕು ಸಾವಿರದಷ್ಟು ಹುಲಿಗಳಿವೆ. ಚರ್ಮಕ್ಕಾಗಿ ಅವನ್ನು ಕೊಲ್ಲುವ ಕಳ್ಳರೂ ಇದ್ದಾರೆ. ಹೊಟ್ಟೆಗಾಗಿ ಜಿಂಕೆ, ಕಾಟಿಗಳನ್ನು ಬೇಟೆಯಾಡುವ ದುಷ್ಟರೂ ಇದ್ದಾರೆ. ನಮ್ಮ ಕಲ್ಪನೆಯಲ್ಲಿ ಮನುಷ್ಯರಾದ ನಾವಷ್ಟೇ ಭೂಮಿಯ ಮೇಲೆ ಬದುಕಿದರೆ ಸಾಕು ; ಇನ್ನಿತರ ಪ್ರಾಣಿಗಳಿಗೆ ಬದುಕುವ ಹಕ್ಕೇ ಇಲ್ಲ–ಎಂಬ ದುರ್ಬುದ್ಧಿ ಮೊಳೆತಿದೆ.

ಕೆಲವೇ ವರ್ಷಗಳ ಹಿಂದೆ–ಇನ್ನೊಂದು ಪ್ರಾಣಿ ಕನ್ನಡನಾಡಿನ ಹಳ್ಳಿಗಳಲ್ಲಿ, ಕಾಡುಗಳಲ್ಲಿ, ಬಯಲಿನಲ್ಲಿ ಅಲೆದಾಡಿ ಬದುಕಿಕೊಂಡಿತ್ತು. ಅದೇ ಮರೆ ಕಿರುಬ. ಅರ್ಧ ತೋಳನಂತಿರುವ ಕಿರುಬ ಕಾಣುವುದಕ್ಕೆ ಅಷ್ಟೇನೂ ಚಂದವಲ್ಲ. ನಾಯಿ, ಮೊಲ ಇಂಥವನ್ನು ಹಿಡಿದು ತಿಂದು ಬದುಕುವ ಪ್ರಾಣಿಯದು. ಒಂದೊಂದು ಕಡೆಯ ಜನ ಅದಕ್ಕೆ ಒಂದೊಂದು ಹೆಸರನ್ನು ಕೊಟ್ಟಿದ್ದಾರೆ. ಅದನ್ನು ಕಿರುಬ ಎನ್ನುತ್ತಾರೆ ; ಕತ್ತೆಕಿರುಬ ಎನ್ನುತ್ತಾರೆ ; ಕುರ್ಕ ಎಂದೂ ಕರೆಯುತ್ತಾರೆ ; ನಾಯಿಹುಲಿ ಎನ್ನುತ್ತಾರೆ ; ಕಿರುವ ಸಿಂಗ ಎನ್ನುತ್ತಾರೆ ; ಹೊನಗ ಎಂದು ಕರೆಯುವವರೂ ಇದ್ದಾರೆ. ಇಂದು ಆ ಹೆಸರುಗಳಷ್ಟೇ ಉಳಿದಿವೆ ; ಹೆಸರಿನ ಪ್ರಾಣಿ ಮಾತ್ರ ಕಾಣಸಿಗುವುದು ಕಷ್ಟ.

ಮನುಷ್ಯನಂಥ ದುಷ್ಟಪ್ರಾಣಿಗೆ ಬಲಿಯಾಗದ ಯಾವ ಪ್ರಾಣಿ ಇದೆ ? ಯಾವ ಪಕ್ಷಿ ಇದೆ ? ಹೇಳಿ. ಕಾಡೇ ಇಲ್ಲದ ಕರ್ನಾಟಕದ ಬಯಲು ಸೀಮೆಯಲ್ಲಿ ಕೇವಲ ೩೦-೪೦ ವರ್ಷಗಳ ಹಿಂದೆ ಕೃಷ್ಣಮೃಗ ಇಲ್ಲವೆ ಎರಳೆಗಳ ಹಿಂಡು ಅಲೆದಾಡಿಕೊಂಡಿತ್ತು. ಜಿಂಕೆಯ ಬಳಗದ ಪ್ರಾಣಿಯದು. ಅದಾರ

ಗಂಡಿಗೆ ಎರಡು ಸುರುಳಿಗೊಂಬುಗಳಿರುತ್ತವೆ ; ಹೆಣ್ಣಿಗೆ ಕೊಂಬಿಲ್ಲ. ಗಂಡು ಬಲಿತಾಗ ಅದರ ಮೈರೋಮ ಕಪ್ಪು ಬಣ್ಣ ತಾಳುತ್ತದೆ. ಅದರಿಂದಾಗಿ ಕೃಷ್ಣಮೃಗ ಎಂಬ ಹೆಸರು ಅದಕ್ಕೆ ಬಂತು. ಪ್ರಾಯ ಬಾರದ ಗಂಡುಗಳು, ಹೆಣ್ಣುಗಳು ಕಂದು ಬಣ್ಣದವು. ಅದರಂಥ ಚೆಲುವಿನ ಮೃಗವಿಲ್ಲ. ನಮ್ಮ ಜನ ಅಂಥ ಸಾವಿರಾರು ಎರಳೆಗಳನ್ನು ಕೊಂದು, ತಿಂದೇ ಮುಗಿಸಿದರು. ತಾಸಿಗೆ ೩೦ ಮೈಲು ವೇಗಕ್ಕಿಂತ ಹೆಚ್ಚು ಓಡಬಲ್ಲ ಆ ಪ್ರಾಣಿಗಳು ಕೂಡ ಮನುಷ್ಯರಿಂದ ತಪ್ಪಿಸಿಕೊಳ್ಳಲಾರದೆ ಸತ್ತವು.

ನಮ್ಮ ಕಾಡುಗಳಲ್ಲಿ ಇತರ ಹಲವಾರು ಚಿಕ್ಕ ಪುಟ್ಟ ಪ್ರಾಣಿಗಳಿವೆ. ಜಿಂಕೆಯ ಜಾತಿಯ ಬರ್ಕವಿದೆ. ಅದು ಒಂದಡಿ ಎತ್ತರದ ಸಣ್ಣ ಜಿಂಕೆ. ಇಂದು ಅದೂ ಕಾಣಸಿಗುವುದಿಲ್ಲ. ಈಗಲೂ ಸಾಕಷ್ಟು ಉಳಿದುಕೊಂಡಿರುವ ಪ್ರಾಣಿಗಳಲ್ಲಿ–ಮುಳ್ಳುಹಂದಿ, ಕಾಡುಹಂದಿಗಳ ಹೆಸರನ್ನು ಹೇಳಬಹುದು. ಎತ್ತರದ ಮರಗಳಲ್ಲಿ ಅಲೆಯುತ್ತ ಜೀವಿಸುವ ಕೋತಿ, ಮುಸುವಗಳ ವಿಚಾರ ಹೇಳಬೇಕಿಲ್ಲ ; ಅಳಿಲುಗಳೂ ಧಾರಾಳವಾಗಿವೆ. ಅಳಿಲಿಗಿಂತ ದೊಡ್ಡದಾದ ಕೆಂಚು ರೋಮದ ಮತ್ತೊಂದು ಸುಂದರ ಅಳಿಲಿದೆ. ಮಲೆನಾಡಿನ ಕಾಡುಗಳಲ್ಲಿ ಈ ಕೆಂಚಳಿಲುಗಳನ್ನು ಧಾರಾಳವಾಗಿ ಕಾಣಬಹುದು. ಇನ್ನೊಂದು ಜಾತಿಯ ಕಪ್ಪು ಅಳಿಲಿದೆ. ಅದು ಮರದಿಂದ ಮರಕ್ಕೆ ತನ್ನ ತೊಗಲಿನ ರೆಕ್ಕೆ ಬಿಡಿಸಿ ಹಾರಬಲ್ಲದು. ಹಾರುವ ಅಳಿಲು ಅದು. ಹಳ್ಳಿಯವರು ಅದನ್ನು ತಪ್ಪಾಗಿ 'ಹಾರಬೆಕ್ಕು' ಎಂದು ಕರೆಯುತ್ತಾರೆ.

ಬೆಕ್ಕು ಅನ್ನುವಾಗ ನೆನಪಾಯಿತು–ನಮ್ಮ ನಾಡಿನಲ್ಲಿ ಎಷ್ಟು ಜಾತಿಯ ಬೆಕ್ಕುಗಳಿಲ್ಲ ? ಮನೆಯ ಅಟ್ಟಕ್ಕೆ ಬರುವ, ಬೆಲ್ಲ ಕದಿಯುವ, ಉದ್ದ ಬಾಲದ ಕಬ್ಬೆಕ್ಕಿದೆ. 'ಮೂಳಬೆಕ್ಕು' ಎಂಬುದು ಅದರ ಇನ್ನೊಂದು ಹೆಸರು. ಕಾಡಿನಲ್ಲಿ ವಾಸಿಸುವ ಒಂದು ಜಾತಿಯ ಹೆಬ್ಬೆಕ್ಕು, ಊರ ಬೆಕ್ಕಿನ ಒಣ್ಣದ್ದು. ಒಂದಡಿ ಎತ್ತರಕ್ಕೆ ಬೆಳೆಯುತ್ತದೆ. ಹಕ್ಕಿಗಳನ್ನು, ಓತಿ, ಏರಣಗಳನ್ನು ಅದು ಬೇಟೆಯಾಡಬಲ್ಲದು. ಹಳ್ಳದ ಬಳಿ ಕುಳಿತು ನೀರಿಗೆ ಕೈಹಾಕಿ ಮೀನನ್ನು ಹಿಡಿದು ತಿನ್ನಬಲ್ಲದು. ಚಿರತೆಯಂಥದ್ದೇ ಬಣ್ಣ, ಬೊಟ್ಟುಗಳಿರುವ ಊರಿನ ಬೆಕ್ಕಿನ ಗಾತ್ರದ್ದೇ ಆದ ಚಿರತೆ ಬೆಕ್ಕು ಇದೆ. ಇನ್ನು ಎರಡು ಮೂರು ಜಾತಿಯ ಬೆಕ್ಕುಗಳ ಆಕೃತಿ ತುಸು ಬೇರೆ ; ಅವಕ್ಕೆ ಊರ ಬೆಕ್ಕಿನ ಮಾಡಿದಂತಿರುವ ದುಂಡು ಮುಖವಿಲ್ಲ. ಅವುಗಳ ಮೂತಿ ಮುಂಗುಸಿಯ ಮೂತಿಯಂತೆ ಮೊನಚು. ಅದಕ್ಕೆ ಉದ್ದನೆಯ ಬಾಲ,

ಆದರ ತುಂಬ ಕೂದಲು. ಅವುಗಳ ಬಣ್ಣ ಬೂದು ಇಲ್ಲವೆ ಕರಿಬೂದು. ಅವಕ್ಕೆ ಪ್ರತ್ಯೇಕ ಹೆಸರಿಲ್ಲ. ಅವನ್ನು ಬೆರು ಇಲ್ಲವೆ ಕಾಡುಬೆಕ್ಕು ಎಂದು ಕರೆಯುತ್ತಾರೆ. ಪುನುಗಿನಂತಹ ಸುಗಂಧ ದ್ರವ್ಯವನ್ನು ಕೊಡುವ ಒಂದು ಜಾತಿಯ ಬೆಕ್ಕಿದೆ. ಅದನ್ನು ಹಿಡಿದು ಜನ ಸಾಕುವುದುಂಟು.

ಇಷ್ಟೆಲ್ಲ ಪ್ರಾಣಿಗಳ ವಿಚಾರ ಹೇಳಿದೆ. ಹಕ್ಕಿಗಳ ವಿಚಾರ ? ನಮ್ಮ ಮಲೆನಾಡಿನ ಅಲ್ಲಲ್ಲಿ ನವಿಲುಗಳ ಹಿಂಡನ್ನು ಇಂದಿಗೂ ಕಾಣಬಹುದು. ಹಿಂದೆ ಕರ್ನಾಟಕದ ಬಯಲು ಸೀಮೆಯ ಅನೇಕ ಊರುಗಳಲ್ಲಿ ಅವು ಹಬ್ಬಿದ್ದುವು. ಈ ಹೊತ್ತು ಅವುಗಳ ಕುಲವೂ ಮನುಷ್ಯನಿಂದಾಗಿ ನಾಶವಾಗುತ್ತ ಬಂದಿದೆ. ಹಕ್ಕಿಗಳನ್ನು ನೋಡಲು ಕಾಡೇ ಬೇಕಿಲ್ಲ ; ಊರೂ ಸಾಕಲ್ಲ. ಆದರೆ ನೋಡುವವರಿಗೆ ಕಣ್ಣು ಬೇಕು. ನಮ್ಮ ನದಿ ದಂಡೆಗಳಲ್ಲಿ, ಕೊಳಗಳಲ್ಲಿ, ವಿಶಾಲ ಹೊಂಡಗಳಲ್ಲಿ, ವರ್ಷದ ಕೆಲವು ಕಾಲ ಹಲವಾರು ಜಾತಿಯ ಜಲ ಪಕ್ಷಿಗಳು ಬಂದು ವಾಸಿಸುತ್ತವೆ. ಅವುಗಳಲ್ಲಿ ತೆರತೆರನ ಬಾತುಗಳಿವೆ; ನೀಳ ಕತ್ತಿನ ಕೊಕ್ಕರೆಗಳಿವೆ ; ತಲೆಯ ಮೇಲೆ ಬಿಳಿ ಜುಟ್ಟಿರುವ ನಾರಾಯಣಿಗಳಿವೆ. ಇವನ್ನು ಬೆಳ್ಳಕ್ಕಿ ಎಂದು ಕರೆಯುವ ವಾಡಿಕೆಯುಂಟು. ನೀರಲ್ಲಿ ಮುಳುಗಿ ಬೇಟೆಯಾಡಬಲ್ಲ ನೀರ್ಕಾಗೆಗಳಿವೆ. ನೀವು ತುಂಗಾ ನದಿ ದಂಡೆಯ ಮಂಡಗದ್ದೆ ಎಂಬಲ್ಲಿಗೋ, ಶ್ರೀರಂಗಪಟ್ಟಣದ ಕಾವೇರಿ ನದಿ ದಂಡೆಯ ರಂಗನ ತಿಟ್ಟಿಗೋ ಒಮ್ಮೆ ಹೋಗಿ ನೋಡಿ. ಅಲ್ಲಿ ಕೊಕ್ಕರೆ ಬಳಗದ ಹಲವಾರು ಜಾತಿಯ ಪಕ್ಷಿಗಳನ್ನು ನೂರಲ್ಲ, ಸಾವಿರಗಟ್ಟಲೆಯಿಂದ ನೋಡಬಹುದು. ಹಾಗೆ ಕಾಣುವ ಸಮಯ ಅಕ್ಟೋಬರದಿಂದ ಮಾರ್ಚಿ ತಿಂಗಳ ತನಕ. ಏಕೆಂದರೆ, ಅಲ್ಲಿಗೆ ಬರುವ ಎಷ್ಟೋ ಪಕ್ಷಿಗಳು, ಕೆಲವು ಸಾವಿರ ಮೈಲುಗಳ ದೂರದಿಂದ ಪ್ರತಿವರ್ಷವೂ ಬಂದು ಹೋಗುತ್ತವೆ. ತಮ್ಮ ಊರಿನ ಚಳಿಗಾಲವನ್ನು ತಪ್ಪಿಸಿಕೊಂಡು ಅವು ನಮ್ಮ ದೇಶಕ್ಕೆ ಬಂದು ಮೊಟ್ಟೆಯಿಟ್ಟು, ಮರಿ ಮಾಡಿ, ಆ ಮರಿಗಳೊಡನೆ ಸ್ವದೇಶಕ್ಕೆ ಮರಳುತ್ತವೆ.

ಎಲ್ಲ ಪ್ರಾಣಿಗಳ ಕಥೆಯನ್ನು ಹೇಳಿ, ಉರಗಗಳ ವಿಚಾರ ಹೇಳದಿದ್ದರೆ ಹೇಗೆ ? ನಿಮ್ಮ ಮನೆಯ ಬಳಿಗೆ ಬರುವ, ಮನೆಯಲ್ಲೇ ವಾಸಿಸುವ ಎರಣಿ (ಹಾವ್ರಾಣಿ) ಓತಿ, ಹಲ್ಲಿ (ಗೌಳಿ) ಇವುಗಳನ್ನು ನೀವು ಕಂಡಿರಲೇಬೇಕು. ನೀರಿನ ತಂಪಿರುವ ಹೊದರುಗಳಲ್ಲಿ, ಕಾಡುಗಳಲ್ಲಿ ಇದೇ ಜಾತಿಯ ದೊಡ್ಡ ಜೀವಿಗಳಿರುತ್ತವೆ. ಒರಟು ಕಪ್ಪು ಚರ್ಮವುಳ್ಳ, ಮರಿ ಮೊಸಳೆಗಳಂತೆ

ಕಾಣಿಸುವ ಉದ್ದ ಬಾಲದ ಈ ಗೌಳಿಯಂಥ ಪ್ರಾಣಿಯನ್ನು ಉಡ ಎಂದು ಕರೆಯುತ್ತಾರೆ. ಅದರಿಂದ ನಮಗೆ ಯಾವ ಬಾಧೆಯೂ ಇಲ್ಲ. ಆದರೂ ಜನ ಅದನ್ನು ಕೊಂದು, ಆದರ ಚರ್ಮದಿಂದ ತಮಟೆ ಹೊದಿಸುತ್ತಾರೆ ; ಕೈಚೀಲ ಮಾಡುತ್ತಾರೆ. ಉಡದ ಅಪ್ಪನಂತಿರುವ ಮೊಸಳೆಯನ್ನು ಕಾಣಬೇಕಾದರೆ ನೀವು ಕೆಲವೊಂದು ನದಿಗಳ ಬಳಿಗೆ ಹೋಗಬೇಕು. ಇಂಥ ನಾಲ್ಕುಕಾಲಿನ ಉರಗಗಳು, ಯುಗಾಂತರದಲ್ಲಿ ತಮ್ಮ ಕಾಲಿನ ಉಪಯೋಗವನ್ನೇ ಮರೆತು ಹಾವುಗಳಾದವು-ಎನ್ನುತ್ತಾರೆ.

ಕನ್ನಡ ನಾಡಿನಲ್ಲಿ ಎಷ್ಟೆಲ್ಲ ಜಾತಿಯ ಹಾವುಗಳಿಲ್ಲ ? ಇಲಿ ಹಿಡಿಯುವ ಕೇರೆ ಹಾವಿದೆ ; ಮರದಲ್ಲಿ ಓಡಾಡಿಕೊಂಡಿರುವ ಹಸರು ಹಾವಿದೆ ; ಕೊಳಗಳಲ್ಲಿ ವಾಸಿಸುವ ಒಳ್ಳೆ ಹಾವಿದೆ ; ನೆಲದ ಮೇಲೆ ಹರಿದು ಬದುಕಿ ಬಾಳುವ ಅನ್ಯ ಜಾತಿಯ ಹಲವು ತೆರನ ಹಾವುಗಳಿವೆ ; ಅವುಗಳಲ್ಲಿ ವಿಷವುಳ್ಳವೂ ಇವೆ ; ಇಲ್ಲದವೂ ಇವೆ. ನಾಗರ ಹಾವು, ಕನ್ನಡಿ ಹಾವು, ಕಟ್ಟದ ಹಾವು ಇಂಥವು ವಿಷವುಳ್ಳವು. ಅವು ಕಡಿದರೆ ನಾವು ಖಂಡಿತ ಬದುಕಲಾರೆವು. ಅರಣ್ಯ ವಾಸಿಯಾದ ಕಾಳಿಂಗನ ಹಾವು ಹತ್ತು ಹದಿನೈದಡಿ ಉದ್ದಕ್ಕೆ ಬೆಳೆಯುವ ಒಂದು ಬಲು ಅಪಾಯದ ಹಾವು. ಅದಕ್ಕೆ ನೀಲಗಪ್ಪು ಮೈ ; ಆ ಮೈಯ ಮೇಲೆ ದೂರ ದೂರಕ್ಕೆ ಬಿಳಿ ಉಂಗುರದಂಥ ಗೆರೆಗಳಿವೆ. ಅದು ತನ್ನ ಹೆಡೆ ಎತ್ತಿದರೆ-ಅದರ ದೇಹದ ಮುಂಭಾಗ ನೆಲದಿಂದ ನಾಲ್ಕಡಿ ಎತ್ತರಕ್ಕೆ ನಿಂತೀತು. ಆ ಹಾವು ಕಡಿದರೆ ಸಾವು ಕೆಲವೇ ಕ್ಷಣಗಳಲ್ಲಿ ಬಂದೀತು.

ಕಡಿದರೆ ವಿಷವಲ್ಲದ ಹಾವುಗಳೂ ಇವೆ. ಮನೆ ಮಠಗಳೊಳಗೆ ಬರುವ ಕೇರೆ ಹಾವು ಅಂಥದ್ದು. ಗುಡ್ಡಗಾಡುಗಳಲ್ಲಿ ಅಲೆಯುವ ಹೆಬ್ಬಾವು (ಆನೆ ಕನ್ನಡಿ, ದಾಸರ ಹಾವು) ಅಂಥದು. ಇದ್ದುದರಲ್ಲಿ ದೊಡ್ಡ ಹಾವೆಂದರೆ ಹೆಬ್ಬಾವು. ಅದು ಸುಮಾರು ೨೦ ಅಡಿ ಉದ್ದಕ್ಕೆ ಬೆಳೆದೀತು. ಅದಕ್ಕೆ ದೊಡ್ಡ ಊಟವೇ ಬೇಕು. ಅದು ಜೀವಂತ ಒಂದು ಆಡನ್ನೂ ಹಿಡಿದು ನುಂಗೀತು ; ಕರುವನ್ನೂ ನುಂಗೀತು. ಹಾಗೆ ನುಂಗಿದಾಗ ಚಲಿಸಲಾರದ ಸ್ಥಿತಿಯಲ್ಲಿ ಜನರ ಕಣ್ಣಿಗೆ ಕಾಣಸಿಕ್ಕಿದರೆ, ಅದರ ಗತಿ ಮೋಕ್ಷವೇ ಸರಿ. ಅದಕ್ಕೆ ಅಂಥ ಭರ್ಜರಿ ಊಟ ತಿಂಗಳಿಗೊಮ್ಮೆ-ಸಿಕ್ಕಿದರೆ ಸಾಕು. ಅದರ ಮುಂದೆ, ದಿನಕ್ಕೆ ಮೂರು ಊಟ ಮಾಡುವ ನಾವು ತಿಂಡಿಪೋತರೆನಿಸೆವೇನು ?

